# ಗಂಜೀಫಾ ಕಲೆ



ಸಂತೋಷಕುಮಾರ ಗುಲ್ವಾಡಿ

ಕರ್ನಾಟಕ ಲಲಿತಕಲಾ ಅಕಾಡೆಮಿ



ಸಂತೋಷಕುಮಾರ ಗುಲ್ವಾಡಿ ಅವರಿಗೆ ಲಲಿತ ಕಲೆಗಳು ಎಂದರೆ ತುಂಬ ಪ್ರೀತಿ. ಸಂಗೀತ, ಕಲೆ, ಶಿಲ್ಪ, ನೃತ್ಯ, ಫೋಟೋಗ್ರಾಫಿಗಳ ಬಗ್ಗೆ ವಿಶೇಷ ಆಸಕ್ತಿ. ಸ್ವತಃ ಲೇಖಕರಾಗಿ, ಅನ್ವೇಷಕರಾಗಿ, 'ತರಂಗ' ಸಂಪಾದಕರಾಗಿ, ದೇಶ ವಿದೇಶಗಳಲ್ಲಿ ಭಾರತೀಯ ಕಲೆಗಳ ಬಗ್ಗೆ ಅವರು ಮಾಡಿದ ಸೇವೆ-ಸಂಶೋಧನೆಗಳು ಅನನ್ಯ. ಕರ್ನಾಟಕದಲ್ಲಿ ಮರೆತು, ಮೂಲೆಗುಂಪಾಗಿ, ಮಾಯವಾದ ಗಂಜೀಫಾ ಕಲೆಯನ್ನು ಪುನರುಜ್ಜೀವನಗೊಳಿಸುವಲ್ಲಿ ಅವರ ಪ್ರಯತ್ನ, ಪರಿಶ್ರಮ, ಪ್ರಚಾರ ದೊಡ್ಡ ಕೊಡುಗೆ.



# ಗಂಜೀಫಾ ಕಲೆ


*ಪ್ರಧಾನ ಸಂಪಾದಕ*

**ಪಿ. ಆರ್. ತಿಪ್ಪೇಸ್ವಾಮಿ**

*ಲೇಖಕ*

**ಸಂತೋಷಕುಮಾರ ಗುಲ್ವಾಡಿ**





**ಕರ್ನಾಟಕ ಲಲಿತ ಕಲಾ ಅಕಾಡೆಮಿ**

ನೃಪತುಂಗ ರಸ್ತೆ, ಬೆಂಗಳೂರು 560 002

## GANJIFA KALE

A Monograph on the Origin and Development of Ganjifa Art (The Micro-miniature painting) on these Indian playing cards by **Santoshkumar Gulvady**, for the Lalitha Kala Academy,
14/3 Canara Finance Corporation Buildings,
Nrupatunga Road, Bangalore 560 002.

Published By **K. Mukundan**, Registrar


*Drawings by*
**Ganjifa Ragupathi Bhat**

*Photos*
**Dr. Chandrapal Singh**
**M.G. Rao**
**H.S. Shashikumar**

*ಪ್ರಧಾನ ಸಂಪಾದಕರು*
**ಪಿ.ಆರ್. ತಿಪ್ಪೇಸ್ವಾಮಿ**

*ಪ್ರಕಟಣಾ ಸಮಿತಿ*
**ವಿ. ಟಿ. ಕಾಳೆ**
**ಎಸ್. ಧನಲಕ್ಷ್ಮಿ**
**ಡಾ. ಬಿ. ಕೆ.ಹಿರೇಮಠ**
**ರಘುಪತಿ ಭಟ್**
**ವೈ.ಎಚ್. ಸೂಗೂರ್**

**ಮುಖಚಿತ್ರ : ಮೈಸೂರು ಶೈಲಿ ಸಾಮ್ರಾಜ್ಯ ಪೇಟಿಕಾರ ಅಂಬಾರಿ ಗಂಜೀಫಾ.**

**ಬೆಲೆ ರೂ. 20-00**

**ಮುಖಚಿತ್ರ ವಿನ್ಯಾಸ : ಜಯದೇವ.**

Printing : **MAYUR PRINT-ADS**
Bangalore 560 053 © 62 0203, 62 0303



# ಮಂಕುತಿಮ್ಮನ ಗಂಜೀಫು

ಜೀವಿಸಂಘವಿದೇನು? ಗಂಜೀಫಿನೆಲೆ ಕಟ್ಟು ।
ದೈವ ಪೌರುಷ ಪೂರ್ವವಾಸನೆಗಳೆಂಬಾ ॥
ಮೂವರದನಾಡುವರು, ಚದರಿಸುತೆ, ಬೆರಸಿಡುತೆ ।
ನಾವೆಲ್ಲರಾಟದೆಲೆ - ಮಂಕುತಿಮ್ಮ ॥

ಎಲೆಕಟ್ಟನಾಗಾಗ ಕಲಸಿಕೊಡುವುದೇ ಸೃಷ್ಟಿ ।
ಬಳಿಕೆಲೆಯ ಗತಿಯೆಂತೊ ಎಲ್ಲಿ ಸೇರುವುದೋ॥
ಬಳಸುತಿಹುದೊಂದೊಂದುಮೊಂದೊಂದು ದಿಕ್ಕಿನಲಿ।
ಅಲೆಯುವೆವು ನಾವಂತು - ಮಂಕುತಿಮ್ಮ ॥

ನಿಲದೆ ನಡೆವುದು ಮೊದಲು ಕೊನೆಯಿಲ್ಲದೀಯಾಟ।
ಕಳೆಯುವುವದರಲಿ ನಮ್ಮ ಜನುಮಜನುಮಗಳು॥
ಗೆಲವಾರ್ಗೊ! ಸೋಲಾರ್ಗೊ ! ಲೆಕ್ಕ ನೋಡುವುದೆಂದೊ।
ಫಲವು ಬರಿಯಾಟವೆಲೊ - ಮಂಕುತಿಮ್ಮ ॥

ಆಟಕ್ಕೆ ಫಲವೇನು? ಕೌತುಕದ ರುಚಿಯೆ ಫಲ ।
ಚೀಟಿ ತಾಂ ಬೀಳೆನೆನಲ್ ಆಟ ಸಾಗುವುದೆ? ॥

ಏಟಾಯ್ತೆ ಗೆಲುವಾಯ್ತೆಯೆಂದು ಕೇಳುವುದೇನು? ।
ಆಟದೋಟವೆ ಲಾಭ - ಮಂಕುತಿಮ್ಮ ॥

ಸತ್ಯ ಶಿವ ಸುಂದರದ ಸಚ್ಚಿದಾನಂದನದ ।
ಭಿತ್ತಿಯಲ್ಲಿ ಬಣ್ಣಬಣ್ಣದ ಜೀವಚಿತ್ರ ॥
ನಿತ್ಯ ನೀನದ ನೆನೆದು ಚಿತ್ರದಲಿ ಮನವಿರಿಸೆ ।
ವೃತ್ತಿ ತನ್ಮಯವಹುದೊ - ಮಂಕುತಿಮ್ಮ ॥

ಸತ್ಯವೆಂಬುದದೆಲ್ಲಿ? ನಿನ್ನಂತರಂಗದೊಳೊ ।
ಸುತ್ತ ನೀನನುಭವಿಪ ಬಾಹ್ಯಚಿತ್ರದೊಳೋ ॥
ಯುಕ್ತಿಯಿಂದೊಂದನೊಂದಕೆ ತೊಡಿಸಿ ಸರಿನೋಡೆ ।
ತತ್ತ್ವದರ್ಶನವಹುದು - ಮಂಕುತಿಮ್ಮ ॥

ಸತ್ಯಾನುಭವವವೆಲ್ಲರಿಂಗವೊಂದೆಂತಹುದು?
ಬೆಟ್ಟದಡಿಯೊಳಗೊಬ್ಬ ; ಕೋಡಬಳಿಯೊಬ್ಬ ॥
ಎತ್ತರದ ದೃಶ್ಯ ಕಣಿವೆಯೊಳಿಹನಿಗಾದೀತೆ? ।
ನೇತ್ರನಂದದೆ ನೋಟ - ಮಂಕುತಿಮ್ಮ ॥

**(ಕನ್ನಡದ ದಾರ್ಶನಿಕ ರಸಋಷಿ ಡಾ॥ ಡಿ.ವಿ. ಗುಂಡಪ್ಪ ಅವರ ಕಾವ್ಯ 'ಮಂಕುತಿಮ್ಮನ ಕಗ್ಗ'ದ 327 ರಿಂದ 333 ರವರೆಗಿನ ಏಳು ಪದ್ಯಗಳು ಗಂಜೀಫಾದ ಜೀವನ ತತ್ತ್ವದರ್ಶನ ಮಾಡುತ್ತವೆ)**



# ಮುಮ್ಮಡಿಯವರಿಗೆ ಮುಡಿಪು

ಮೈಸೂರು ಶೈಲಿಯ 'ದೇವರ ಆಟ' ವನ್ನು ಪುನರುತ್ಥಾನಗೊಳಿಸಿ, ಸ್ವತಃ ಆಡುತ್ತ, ಅದರಲ್ಲಿ ಚಾಮುಂಡೇಶ್ವರೀ, ಪಂಚಪಾಂಡವ, ನವೀನ ದಶಾವತಾರ, ಕೃಷ್ಣರಾಜ, ಸದ್ಯೋಜ್ಯಾತ, ನವೀನರಾಮ, ಜಗನ್ಮೋಹನ, ನವಗ್ರಹ, ನವರತ್ನ, ಅಷ್ಟದಿಕ್ಪಾಲ, ಸಾಮ್ರಾಜ್ಯ, ಮಹಿಷಮರ್ದಿನಿ, ದಶಾವತಾರ, ರಾಮಾಯಣ, ದೇವೀದಶಾವತಾರ, ಸರ್ವಮಂಗಳಾ, ಮನೋಹರ, ಅಷ್ಟೈಶ್ವರ್ಯ ಮೊದಲಾದ 'ಪೇಟಿಕಾ'ಗಳನ್ನು ಆವಿಷ್ಕರಿಸಿ, 'ಶ್ರೀ ತತ್ತ್ವ ನಿಧಿ' ಮೊದಲಾದ ಶಾಸ್ತ್ರೀಯವಾದ 60 ಗ್ರಂಥಗಳನ್ನು ರಚಿಸಿ, ನೂರಾರು ಕಲಾವಿದರಿಗೆ ಪ್ರೋತ್ಸಾಹ, ಆಶ್ರಯಗಳನ್ನು ಕೊಟ್ಟು, 'ಶ್ರೀ ಕೃಷ್ಣರಾಜ ಭೂಪ, ಮನೆಯೆಲ್ಲ ದೀಪ' ಎಂಬ ನಾಣ್ಣುಡಿಗೆ ಕಾರಣರಾಗಿ, ಎಲ್ಲರಿಗೂ ಆನಂದಾನುಭವ ಕೊಟ್ಟ ಮೈಸೂರು ಸಂಸ್ಥಾನದ ಅರಸರಾದ



ಮುಮ್ಮಡಿ ಕೃಷ್ಣರಾಜ ಒಡೆಯರ್ (1794 - 1868)

ಅವರ ಸಾಹಿತ್ಯ, ಸಂಗೀತ, ಕಲೆ, ನೃತ್ಯ, ಶಿಲ್ಪ ಸೇವೆಗಳನ್ನು ನೆನೆಯುತ್ತ, ಅವರ ದ್ವಿ -ಶತಮಾನೋತ್ಸವ ಕಾಲಕ್ಕೆ ಪುಣ್ಯಸ್ಮೃತಿಗಳೊಂದಿಗೆ ಅರ್ಪಣೆ.

● ಗುಲ್ವಾಡಿ



## ಪ್ರಧಾನ ಸಂಪಾದಕರ ನುಡಿ

ಗಂಜೀಫಾ ಚಿತ್ರಕಲೆ ಸಾಂಪ್ರಾದಾಯಿಕ ಚಿತ್ರಕಲಾ ಪ್ರಪಂಚದ ಒಂದು ವಿಶಿಷ್ಟ ಕಲೆ.

ಗಂಜೀಫಾ ಶಬ್ದ ಬಂದಿದ್ದೇ ಮುಘಲರ ಕಾಲದಲ್ಲಿ. ಇರಾಣದಿಂದ ಈ ಪರ್ಶಿಯನ್ ಶಬ್ದ ಬಂದಿತು. ಆದರೂ ಇದು ಭಾರತದ್ದೇ ಕಲೆ.

ಮುಮ್ಮಡಿಯವರು ಸೇರಿದಂತೆ ಮೈಸೂರಿನ ಅರಸು ಮನೆತನ ಈ ಕಲೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದೆ. ಆಗ ಇದನ್ನು ದೇವರ ಆಟ ಎಂದು ಕರೆಯಲಾಗುತ್ತಿತ್ತು.

ಮೈಸೂರಿನ ಜಗನ್ಮೋಹನ ಬಂಗಲೆಯಲ್ಲಿ ಗಂಜೀಫಾ ಎಲೆಗಳನ್ನು ನಾನು ಮೊದಲು ಕಂಡಿದ್ದೆ. ನಂತರ ಮೈಸೂರು ವಿಶ್ವವಿದ್ಯಾನಿಲಯದ ಜಾನಪದ ವಸ್ತು ಸಂಗ್ರಹಾಲಯಕ್ಕೆ ಕೆಲವು ಕಡೆಯಿಂದ ಗಂಜೀಫಾ ಎಲೆಗಳಿರುವ ಸುಂದರ ಪೆಟ್ಟಿಗೆಯನ್ನು

ಸಂಗ್ರಹಿಸಿದ್ದೆ. ಇವುಗಳ ಆಕಾರ, ಬಣ್ಣಗಾರಿಕೆ ವಸ್ತುವಿಶೇಷ ಎಲ್ಲವೂ ನಮ್ಮ ಕಲಾವಿದರ ಸ್ವಂತಿಕೆಯಿಂದ ಕೂಡಿದ್ದುವು.

ಈ ಬಗ್ಗೆ ಹೆಚ್ಚಿನ ಆಸಕ್ತಿ ತೋರಿದ್ದು ಶ್ರೀ ರಘುಪತಿ ಭಟ್ಟರು. ಧರ್ಮಸ್ಥಳದಲ್ಲಿ ಡಾ||ವೀರೇಂದ್ರ ಹೆಗಡೆಯವರು ಅವರನ್ನು ನನಗೆ ಪರಿಚಯಿಸಿದರು. ಭಟ್ಟರು ಹೆಗ್ಗಡೆ ಅವರಿಗೆ ನೀಡಿದ ಕೆಲವು ಗಂಜೀಫಾ ಎಲೆಗಳು ನನ್ನ ಗಮನ ಸೆಳೆದವು. ಅವರು ವಾಸವಾಗಿದ್ದ ನಾಗಮಂಗಲದಲ್ಲಿ ಅವರನ್ನು ಭೇಟಿ ಮಾಡಿದಾಗ ಅವರು ರಚಿಸುತ್ತಿದ್ದ ಗಂಜೀಫಾ ಎಲೆಗಳು, ಅದಕ್ಕೆ ಬಳಸುತ್ತಿದ್ದ ವರ್ಣಗಳು, ತಾವೇ ರಚಿಸಿಕೊಂಡ ಕುಂಚಗಳು ನನಗೆ ಅಚ್ಚರಿ ತರಿಸಿದುವು.

"ತರಂಗ" ವಾರಪತ್ರಿಕೆ ಗಂಜೀಫಾ ಕಲೆಯ ಬಗ್ಗೆ ಹೆಚ್ಚಿನ ಪ್ರಚಾರ ನೀಡಿತು. ಕರ್ನಾಟಕದಿಂದ ಲಂಡನ್‌ವರೆಗೆ ಈ ಕಲೆಯ ಪ್ರದರ್ಶನವನ್ನು ರಘುಪತಿಭಟ್ಟರು ನಡೆಯಲು "ತರಂಗ" ಸಂಪಾದಕರಾದ ಶ್ರೀ ಸಂತೋಷಕುಮಾರ್ ಗುಲ್ವಾಡಿ ಅವರು ಕಾರಣಕರ್ತರಾದರು. ಗಂಜೀಫಾ ಕಲೆಯ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಕನ್ನಡ ಜನತೆಗೆ ಕೃತಿಮೂಲಕ ಪ್ರಕಟಿಸುವುದು ಅಕಾಡೆಮಿಯ ಉದ್ದೇಶವಾಯಿತು.

ಶ್ರೀ ಗುಲ್ವಾಡಿಯವರು ಈ ಕಲೆಯ ಬಗ್ಗೆಆಳವಾದ ಅಧ್ಯಯನ ಮಾಡಿದವರು. ಹೆಚ್ಚಿನ ಮಾಹಿತಿಯನ್ನು ಈ ಕಿರು ಗ್ರಂಥದಲ್ಲಿ ನೀಡಿದ್ದಾರೆ. ಈ ಕಲಾ ಪ್ರಕಾರದ ವೈವಿಧ್ಯತೆ, ವೈಶಿಷ್ಟತೆ ಗಮನಾರ್ಹವಾದುದು.

ಭಾರತದಲ್ಲಿ ಹುಟ್ಟಿದ ಈ ಕಲೆ ನಂತರ ವಿದೇಶಗಳಲ್ಲಿ ಪ್ರಸಿದ್ಧಿ ಪಡೆದುದರ ಬಗ್ಗೆ ಗುಲ್ವಾಡಿಯವರು ವಿವರಿಸಿದ್ದಾರೆ. ನಮ್ಮ ದೇಶದ ವಿವಿಧ ಕಡೆಗಳಲ್ಲಿ ಇರುವ ಗಂಜೀಫಾ ಕೇಂದ್ರಗಳ ಬಗ್ಗೆಯೂ ವಿವರವಾಗಿ ತಿಳಿಸಿದ್ದಾರೆ. ಕರ್ನಾಟಕದಲ್ಲಿ ಈ ಕಲೆಯನ್ನು ಅಭ್ಯಾಸ

ಮಾಡಿ ಮುಂದುವರಿಸಿಕೊಂಡು ಹೋಗುತ್ತಿರುವ ಕೆಲವೇ ಕೆಲವರಲ್ಲಿ ಶ್ರೀ ಗಳಾದ ರಘುಪತಿಭಟ್ಟರನ್ನು ಬಿಟ್ಟರೆ ಮೈಸೂರಿನ ಹಿರಿಯ ಕಲಾವಿದ ರಾಮನರಸಯ್ಯ ಹಾಗೂ ಇವರ ಪುತ್ರಿ ಶ್ರೀಮತಿ ಚಂದ್ರಿಕಾ ಪದ್ಮನಾಭನ್ ಇವರೇ ಅಲ್ಲದೆ ತೆರೆಮರೆಯಲ್ಲಿರುವ ಕಲೆಗಾರರನ್ನು ಸ್ಮರಿಸಬಹುದಾಗಿದೆ.

ಎಲ್ಲ ಪ್ರಕಾರದ ಕಲೆ ಮತ್ತು ಕಲಾವಿದರನ್ನು ಗುರುತಿಸಿ ಪ್ರೋತ್ಸಾಹಿಸುತ್ತಾ ಬರುತ್ತಿರುವ ಶ್ರೀಗುಲ್ವಾಡಿಯವರು ಸೂಕ್ಷ್ಮಾತಿ ಸೂಕ್ಷ್ಮಕಲೆಯಾದ ಗಂಜೀಫವನ್ನು ಹೆಚ್ಚು ಪ್ರಚುರ ಪಡಿಸಿದವರು ಇವರಿಂದಲೇ ಈ ಕಲಾ ಪ್ರಕಾರದ ಬಗ್ಗೆ ಬರೆಸಬೇಕೆಂಬುದು ಅಕಾಡಮಿಯ ಅಭಿಲಾಷೆಯಾಯಿತು.

ಇದರ ಫಲವೇ ಈ ಕೃತಿ. ಖ್ಯಾತ ಲೇಖಕರೂ, ಕಲಾಭಿಮಾನಿಗಳೂ ಆದ ಶ್ರೀ ಸಂತೋಷಕುಮಾರ ಗುಲ್ವಾಡಿ ಅವರಿಗೆ, ಸುಂದರವಾಗಿ ಮುದ್ರಿಸಿದ ಮಯೂರ ಪ್ರಿಂಟ್ ಆ್ಯಡ್ಸ್‌ರವರಿಗೆ ಕೃತಜ್ಞತೆಗಳು.

**ಪಿ.ಆರ್. ತಿಪ್ಪೇಸ್ವಾಮಿ**
*ಪ್ರಧಾನ ಸಂಪಾದಕರು.*





## ಮುನ್ನುಡಿ

ಗಂಜೀಫಾ ಆಟವನ್ನು ನಮ್ಮ ಮನೆಯಲ್ಲಿ ನನ್ನ ಅಜ್ಜನವರು ಹವ್ಯಾಸಕ್ಕಾಗಿ ಆಡುವುದನ್ನು ಬಾಲ್ಯದಲ್ಲಿಯೇ ನಾನು ಕಂಡಿದ್ದೆ. ಆಗಿನ್ನೂ ನಾನು ಮಾಧ್ಯಮಿಕ (ಮಿಡ್ಲ್) ಶಾಲೆಯಲ್ಲಿದ್ದೆ. ಕುತೂಹಲದಿಂದ ಈ ಗಂಜೀಫಾ ಎಲೆಗಳನ್ನು ಹಿಡಿದು ನಾನು ನೋಡುತ್ತಿದ್ದಾಗ ನನ್ನ ತಂದೆಯವರು ಗಂಜೀಫಾ ಹಾಗೂ ಇಸ್ಪೀಟು ಎಲೆಗಳೆರಡನ್ನೂ ಹಿಡಿದು ಅದರ ಹಿನ್ನೆಲೆಯನ್ನು ಸ್ವಾರಸ್ಯಕರವಾಗಿ ನನಗೆ ಹೇಳಿದ್ದು ಈಗಲೂ ನೆನಪಿದೆ. ಗಂಜೀಫಾ ಮತ್ತು ಇಸ್ಪೀಟು ಆಟಗಳಲ್ಲಿ ನನಗೆ ಆಸಕ್ತಿ ಬೆಳೆಯಲಿಲ್ಲ. ಆದರೆ ಗಂಜೀಫಾ ಎಲೆಗಳ ಕಲೆಯ ಕುರಿತು ಕುತೂಹಲ ಉಳಿದಿತ್ತು.

ಒಮ್ಮೆ ಮೈಸೂರಿಗೆ ಹೋದಾಗ ಜಗನ್ಮೋಹನ ಕಲಾ ಶಾಲೆಯಲ್ಲಿ ಗಂಜೀಫಾಗಳನ್ನು ನೋಡಿದ್ದೆ. ಮುಂದೆ ಮುಂಬಯಿಯಲ್ಲಿ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಂ, ಬರೋಡ ಮ್ಯೂಸಿಯಂ (ಇಲ್ಲಿ ಹಸ್ತಿದಂತದ ಗಂಜೀಫಾಗಳಿವೆ), ಅಹ್ಮದಾಬಾದ್, ಕಲ್ಕತ್ತ ಮ್ಯೂಸಿಯಂಗಳಲ್ಲಿ ಪುಣೆಯ ರಾಜಾ

ಕೇಳ್ಕರ ಮ್ಯೂಸಿಯಂನಲ್ಲಿ ಹಳೆಯ ಗಂಜೀಫಾಗಳನ್ನು ನೋಡುವ ಅವಕಾಶವಾಯಿತು. ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಮಾತ್ರವಲ್ಲ, ನಮ್ಮ ಇಡೀ ದೇಶದಲ್ಲಿ ಹಲವಾರು ಶೈಲಿಯ ಗಂಜೀಫಾ ಎಲೆಗಳು ಇರುವುದು, ಪ್ರತಿಯೊಂದನ್ನು ಕಲಾವಿದರು ಸೂಕ್ಷ್ಮವಾಗಿ ಕೈಯಿಂದಲೇ ರಚಿಸುವಂಥ ಅದ್ಭುತ ಕಲಾವಂತಿಕೆ ಬೆಳೆದಿರುವುದನ್ನು ಕಂಡುಕೊಂಡೆ. ಸ್ವಾತಂತ್ರ್ಯಾನಂತರ ಈ ಆಟ ಹಾಗೂ ಗಂಜೀಫಾ ಕಲೆ ಎರಡೂ ನಶಿಸಿ ಹೋಗುವುದನ್ನು ಕಂಡು ಖೇದವಾಗುತ್ತಿತ್ತು.

ಗಂಜೀಫಾ ಬಗ್ಗೆ ನನಗೆ ಮತ್ತೆ ಕುತೂಹಲ ಬೆಳೆದದ್ದು 1987ರಲ್ಲಿ ನಾಗಮಂಗಲದಿಂದ ರಘುಪತಿ ಭಟ್ಟರು ತಾನು ಅಂಥ ಗಂಜೀಫಾ ರಚಿಸುತ್ತೇನೆ ಎಂದು ನನಗೆ ಪತ್ರ ಬರೆದು ತಿಳಿಸಿದಾಗ. ಆದರೆ ರಘುಪತಿ ಭಟ್ಟರನ್ನು ಭೇಟಿಯಾಗಿ, ಅವರ ಗಂಜೀಫಾಗಳನ್ನು ನೋಡುವಾಗ ಮತ್ತೆ ಎರಡು ವರ್ಷಗಳೇ ಕಳೆದುವು. ರಘುಪತಿ ಭಟ್ಟರು ಕರ್ನಾಟಕದಲ್ಲಿ ಸಂಪೂರ್ಣವಾಗಿ ಸತ್ತುಹೋದ ಗಂಜೀಫಾ ಕಲೆಗೆ ಪುನರ್ಜನ್ಮ ಕೊಟ್ಟ ಅದ್ವಿತೀಯ ಕಲಾವಿದರು. ಅವರೇನೂ ಪಾರಂಪಾರಿಕವಾಗಿ ಕಲಾವಿದರಲ್ಲ. ದೈವಕೃಪೆಯಿಂದಲೇ ಅವರಿಗೆ ರೇಖೆ ಮತ್ತು ಬಣ್ಣಗಳ ಸಂಯೋಜನೆಯಲ್ಲಿ ಸಿದ್ಧಿಯುಂಟಾಗಿದೆ. ಅವರನ್ನು ಮೊತ್ತ ಮೊದಲಾಗಿ ನಂದಳಿಕೆಯಲ್ಲಿ, ಮುದ್ದಣನ ಕುರಿತ ಕಾರ್ಯಕ್ರಮಕ್ಕೆ ಹೋದಾಗ ಅವರ ಊರಲ್ಲೇ ಭೇಟಿಯಾದೆ. ಅವರು 32ವರ್ಷಗಳ ತರುಣನಾಗಿರಬಹುದೆಂದು ನಾನು ಊಹಿಸಿರಲಿಲ್ಲ. ಅವರು ರಚಿಸಿದ ವಿಶ್ವರೂಪ, ಶ್ರೀ ರಂಗನಾಥ, ಲಕ್ಷ್ಮೀ, ನವನಾರಿ ಕುಂಜರ, ಪಂಚನಾರೀ ತುರಗ ಇವುಗಳನ್ನು ನೋಡಿ ನಾನು ಒಮ್ಮೆಲೇ ಅವಾಕ್ಕಾದೆ. ಅವರ ಸಜೀವ ರೇಖೆಗಳಲ್ಲಿ ಕಾಣುವ ಅದ್ಭುತ ಸಂಚಾರ

ಅಲೌಕಿಕ. ಕೂದಲೆಳೆಗಿಂತಲೂ ತೆಳ್ಳಗಾದ ಸೂಕ್ಷ್ಮ ರಚನೆಗಳು, ವರ್ಣವಿನ್ಯಾಸ, ದೇಹಮಾನ ಪ್ರಮಾಣ, ಪಶು, ಪಕ್ಷಿ, ಗಿಡಗಳ ಅಪ್ಪಟ ಭಾರತೀಯ ಶೈಲಿ - ಇವೆಲ್ಲವನ್ನು ನೋಡಿ ಕೂಡಲೇ'ತರಂಗ' (ಜುಲೈ2,1989) ದಲ್ಲಿ ಮುಖಪುಟ ಲೇಖನ ಮಾಡಿದೆ.

ಅಂದಿನಿಂದ ಈ ಗಂಜೀಫಾ ಕಲೆಯನ್ನು ಹೇಗಾದರೂ ಕರ್ನಾಟಕದಲ್ಲಿ ಉಳಿಸಲೇ ಬೇಕು ಎಂದು ರಘುಪತಿಯೊಂದಿಗೆ ಹಟತೊಟ್ಟು ಅದರ ಪ್ರದರ್ಶನ, ಪ್ರಚಾರ, ತಿಳಿವಳಿಕೆಗಳ ಬಗ್ಗೆ ನಾನು ಸಕ್ರಿಯನಾದೆ. ಈ ಪುಟ್ಟ ಪುಸ್ತಕವೂ ಅದೇ ಪ್ರಯತ್ನದ ಒಂದು ಅಂಶ.

ಮಾನವನು ತನ್ನ ಖುಷಿಗಾಗಿ ಸಾವಿರಾರು ಆಟಗಳನ್ನು ಕಂಡು ಹುಡುಕಿದ್ದಾನೆ. ಆದರೆ ಆಟಕ್ಕಿಂತ ಮಿಗಿಲಾಗಿ ಕೈಕೌಶಲದ ಕಲೆಯಿಂದಾಗಿ ಗಂಜೀಫಾ ವಿಶಿಷ್ಟ ಎನಿಸಿದೆ. ಇಂದು ಗಂಜೀಫಾ ಕಲೆ ಅಚ್ಚ ಭಾರತೀಯ ಮೈಕ್ರೊ ಮಿನಿಯೇಚರ್ (MICRO MINIA-TURE) ಕಲೆಯಾಗಿ ಉಳಿದಿದೆ. ಈ ಕಲಾ ಪ್ರಕಾರಕ್ಕೆ ವಿದೇಶೀ ಪ್ರವಾಸಿಗರು ಹಾಗೂ ಕಲಾರಸಿಕರಿಂದ ಮಾತ್ರ ಸಾಕಷ್ಟು ಪ್ರೋತ್ಸಾಹ ದೊರೆಯುತ್ತಿದೆ. ನಮ್ಮ ದೇಶದ ಜನರು, ಕಲಾವಿದರೂ ಸೇರಿ ಗಂಜೀಫಾ ಕಲೆಯ ಬಗ್ಗೆ ಅದಕ್ಕೆ ಸಿಗಬೇಕಾದಷ್ಟು ಪ್ರೋತ್ಸಾಹವನ್ನು ಕೊಡುತ್ತಿಲ್ಲ. ಕ್ಯಾನವಾಸ್ ಮತ್ತು ಕುಂಚ ಹಿಡಿದು 'ನವ್ಯ'ರೆನಿಸಿದವರಂತೂ ಇದನ್ನು ಒಂದು ಕಲೆ ಎಂದು ಕೂಡ ಪರಿಗಣಿಸುತ್ತಿಲ್ಲ. ಅದು ನಮ್ಮ ದೌರ್ಭಾಗ್ಯ.

ಜಗತ್ತಿನ ಅತ್ಯಂತ ಪ್ರಮುಖ ಆರ್ಟ್ ಗ್ಯಾಲರಿ ಹಾಗೂ ಮ್ಯೂಸಿಯಂಗಳಲ್ಲಿ ಭಾರತೀಯ ಗಂಜೀಫಾಗಳನ್ನು ಸಂಗ್ರಹಿಸಿ ಇಟ್ಟಿದ್ದಾರೆ. ಅದರ ಅಧ್ಯಯನ, ಸಂಶೋಧನೆ ನಡೆಸುತ್ತಿದ್ದಾರೆ.

ಲಂಡನ್‌ನ ಬ್ರಿಟಿಷ್ ಮ್ಯೂಸಿಯಂ, ಹಾರ್ನಿಮನ್ ಮ್ಯೂಸಿಯಂ, ವಿಕ್ಟೋರಿಯಾ ಅಂಡ್ ಆಲ್ಬರ್ಟ್ ಮ್ಯೂಸಿಯಂ, ಇಂಡಿಯಾ ಲೈಬ್ರೆರಿ ಆಫೀಸು, ಲಂಡನ್, ಪ್ಯಾರೀಸ್ಸಿನ ಲೂವರ್, ಮ್ಯೂಸ್ ಡಿ ಓರ್ಸೆ, ಬಿಬ್ಲಿಯೊತ್ ನ್ಯಾಷನಲ್, ವಾಷಿಂಗ್‌ಟನ್‌ನ ಸ್ಮಿತ್‌ಸೊನಿಯನ್, ಕೊಪೆನ್‌ಹೇಗನ್, ರೋಮ್‌ನ ಮ್ಯೂಸಿಯಂಗಳಲ್ಲಿ ಭಾರತೀಯ ಗಂಜೀಫಾ ಸಂಗ್ರಹ ಕಂಡು, ನನಗೆ ಈ ದೇಶದ ಜನರ ಕಲಾಪ್ರೇಮದ ಉತ್ಕರ್ಷ, ಉತ್ಕಟತೆಗಳ ಅನುಭವವಾಯಿತು.

ಲಂಡನ್ನಿನ ಭಾರತೀಯ ವಿದ್ಯಾಭವನದ ನಿರ್ದೇಶಕರಾದ ಹಾಗೂ ನನ್ನ ಹಿರಿಯ ಮಿತ್ರರಾದ ಮತ್ತೂರು ಕೃಷ್ಣಮೂರ್ತಿ, ಉಪನಿರ್ದೇಶಕ ಡಾ| ನಂದಕುಮಾರ ಮತ್ತೂರು ಹಾಗೂ ಅಧ್ಯಕ್ಷ ಮಾನೆಕ್ ದಲಾಲ್‌ಜಿ ಅವರು 1992 ರಲ್ಲಿ ರಘುಪತಿ ಭಟ್ಟರ ಗಂಜೀಫಾ ಕಲಾಪ್ರದರ್ಶನ ನಡೆಸಿದರು. ನನಗೆ ತಿಳಿದ ಮಟ್ಟಿಗೆ ಕರ್ನಾಟಕದ್ದೇ ಏಕೆ, ಭಾರತೀಯ ಗಂಜೀಫಾಗಳ ವಿದೇಶಿ ಒನ್‌ಮ್ಯಾನ್ ಶೋಗಳಲ್ಲಿ ಇದೇ ಪ್ರಥಮ. ಈ ಪ್ರದರ್ಶನ ಲಂಡನ್ ಕಲಾಪ್ರೇಮಿಗಳಿಗೆ ಹುಚ್ಚು ಹಿಡಿಸಿತು. ವಿಕ್ಟೋರಿಯಾ ಆಲ್ಬರ್ಟ್ ಮ್ಯೂಸಿಯಂನ ಭಾರತೀಯ ವಿಭಾಗದ ಮುಖ್ಯ ಕ್ಯುರೇಟರ್ ಡಾ| ಡಿಬೋರಾ ಸ್ವೆಲೊ ಹಾಗೂ ಉಪಕ್ಯುರೇಟರ್ ರೋಸ್‌ಮೇರಿ ಕ್ರಿಲ್ ಇವರು ಕೂಡಲೇ ಗಂಜೀಫಾ ರಾಮಾಯಣದ 60 ಎಲೆಗಳನ್ನು ರಘುಪತಿ ಭಟ್ಟರಿಂದ ವಿಶೇಷವಾಗಿ ಮಾಡಿಸಿ, ತಮ್ಮ ಭಾರತೀಯ ವಿಭಾಗದಲ್ಲಿ ಪ್ರದರ್ಶನಕ್ಕೆ ಇಟ್ಟಿದ್ದಾರೆ. ಜುಲೈ1994ರಲ್ಲಿ ಈ ಗಂಜೀಫಾಗಳ ಬಗ್ಗೆ ಅಲ್ಲಿ ನಾನೊಂದು ವಿಶೇಷ ಉಪನ್ಯಾಸ ಕೊಡಲು ಅವರಿಂದ ಆಹ್ವಾನಿತನಾಗಿದ್ದೆ.

ಆಕ್ಸ್‌ಫರ್ಡ್ ಬಳಿಯ ವಾಟರ್ ಪೆರ್ರಿ ಎಂಬಲ್ಲಿ 'ಆರ್ಟ್ ಇನ್ ಆಕ್ಷನ್' (ART IN ACTION) ನಲ್ಲೂ ಗಂಜೀಫಾ ರಘುಪತಿ ಭಟ್ಟರ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆಗಳನ್ನು(ಜುಲೈ1994) ಅಂತಾರಾಷ್ಟ್ರೀಯ ಕಲಾ ಮೇಳದಲ್ಲಿ ನಡೆಸಿದರು. ಅದು ಗಂಜೀಫಾ ವಿಜಯಯಾತ್ರೆಯೇ ಆಯಿತು.

ಈ ಎಲ್ಲ ಸಂದರ್ಭಗಳಲ್ಲಿ ಗಂಜೀಫಾ ಕಲೆಯ ಬಗ್ಗೆ ವಿದೇಶೀ ಜನರಿಗೆ ಇರುವ ಕಳಕಳಿ ಕಂಡು ನನಗೆ ಅತೀವ ಅಭಿಮಾನವಾಗಿದೆ. ಕರ್ನಾಟಕ ಸರಕಾರದ ಹಿರಿಯ ಅಧಿಕಾರಿ ಚಿರಂಜೀವಿ ಸಿಂಘ್, ಕರ್ನಾಟಕ ಚಿತ್ರಕಲಾ ಪರಿಷತ್ತಿನ ನಂಜುಂಡರಾಯರು, ಲಲಿತಕಲಾ ಅಕಾಡೆಮಿಯ ಈಗಿನ ಅಧ್ಯಕ್ಷರಾದ ಪಿ.ಆರ್. ತಿಪ್ಪೇಸ್ವಾಮಿಯವರು, ಕರ್ನಾಟಕ ಕ್ರಾಫ್ಟ್ ಕೌನ್ಸಿಲಿನ ವಿಮಲಾ ರಂಗಾಚಾರ್, ಕರ್ನಾಟಕ ಪುರಾತತ್ತ್ವ ಇಲಾಖೆಯ ಡೈರೆಕ್ಟರ್ ಡಾ|ದೇವರಾಜ್ ಇವರ ಪ್ರಯತ್ನಗಳಿಂದ, ಮತ್ತು ಮುಖ್ಯವಾಗಿ ಧರ್ಮಸ್ಥಳದ ರಾಜರ್ಷಿ ಡಾ|ವೀರೇಂದ್ರ ಹೆಗ್ಗಡೆ ಅವರ ಪ್ರೋತ್ಸಾಹದಿಂದ ಗಂಜೀಫಾ ಕಲೆ ಕರ್ನಾಟಕದಲ್ಲಿ ಜೀವಂತವಾಗಿ ಉಳಿದೀತು ಎಂಬ ಭರವಸೆ ಈಗ ಮೂಡಿದೆ.

ಗಂಜೀಫಾ ಬಗ್ಗೆ ನನ್ನ ತಂದೆಯವರು ಒಂದು ಕತೆ ಹೇಳುತ್ತಿದ್ದರು. ಅಕ್ಬರ್ ಚಕ್ರವರ್ತಿ ಗಂಜೀಫಾ ಆಟವಾಡುತ್ತ ತನ್ನ ಮಂತ್ರಿ ಮತ್ತು ಇತರ ನೌಕರರ ಚುರುಕುತನ, ಚಾಣಾಕ್ಷತನ, ತಾಳ್ಮೆಗಳ ಪರೀಕ್ಷೆ ಮಾಡುತ್ತಿದ್ದನಂತೆ. ಇಂದು ಗಂಜೀಫಾ ಕಲೆಯೊಂದಿಗೆ ಕರ್ನಾಟಕದ ಸಾಂಪ್ರದಾಯಿಕ ಚಿತ್ರಕಲೆ ಮತ್ತೊಮ್ಮೆ ಪುನರುತ್ಥಾನಗೊಳ್ಳಬೇಕಾಗಿದೆ. ಅದರ ಸತ್ವಪರೀಕ್ಷೆ ನಡೆದಿದೆ.

ಇದು ಪಂಡಿತ ಗ್ರಂಥವಲ್ಲ. ಗಂಜೀಫಾ ಕಲೆಯ ಕುರಿತು ಸಾಮಾನ್ಯರಿಗೂ ಆಸಕ್ತಿ ಹುಟ್ಟಿಸುವ ಸರಳ ಪ್ರಯತ್ನವಿದು.

ಗಂಜೀಫಾ ಕುರಿತು ಕನ್ನಡದಲ್ಲಿ ಪುಸ್ತಕಗಳೇ ಇಲ್ಲ. ಇದೊಂದು ಪ್ರಥಮ ಪ್ರಯತ್ನ. ಈ ಕಿರು ಪುಸ್ತಕವನ್ನು ನನ್ನಿಂದಲೇ ಬರೆಸಿಕೊಳ್ಳಬೇಕೆಂದು ಅಕಾಡೆಮಿ ಅಧ್ಯಕ್ಷರಾದ ಪಿ.ಆರ್. ತಿಪ್ಪೇಸ್ವಾಮಿಯವರು ಹಲವು ಬಾರಿ ಒತ್ತಾಯಿಸಿ ನನಗೆ ಪತ್ರ ಬರೆದರು. ವೈಯುಕ್ತಿಕವಾಗಿ ಸಿಕ್ಕಿದಾಗಲೆಲ್ಲ ನೆನಪಿಸಿದರು. ಅವರನ್ನು ದೀರ್ಘಕಾಲ ಕಾಯಿಸಿ, ತಡಮಾಡಿ ಈ ಪುಸ್ತಕದ ಹಸ್ತಪ್ರತಿ ಕೊಟ್ಟಿದ್ದಕ್ಕೆ ಪ್ರತಿಯಾಗಿ ಅವರು ಕೂಡಲೇ ಪ್ರಕಟಿಸುವ ಭರವಸೆ ಕೊಟ್ಟರು. ಅವರಿಗೆ ಅನನ್ಯ ಧನ್ಯವಾದಗಳು. ಈ ಪುಸ್ತಕ ಬೆಳಕು ಕಾಣಲು ಕಾರಣರಾದ ಲಲಿತ ಕಲಾ ಅಕಾಡೆಮಿಯ ರಿಜಿಸ್ಟ್ರಾರರೂ, ನನ್ನ ಮಿತ್ರರೂ ಆದ ಕೆ. ಮುಕುಂದನ್ ಮತ್ತು ಕಲಾ ಲೇಖಕ ಮರಿಶಾಮಾಚಾರ್ ಅವರಿಗೂ ಕೃತಜ್ಞತೆಗಳು.

ತನ್ನ ಅಧ್ಯಕ್ಷತೆಯ ಕಾಲದಲ್ಲಿ ಗಂಜೀಫಾ ಕಲೆಗೆ ಮಾತ್ರವಲ್ಲ, ವಿವಿಧ ಶೈಲಿಗಳ ಕಲೆಗಳಿಗೂ ವಿಶೇಷ ಪ್ರೋತ್ಸಾಹ ಕೊಟ್ಟು, ಕಲೆಯ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವಾಡಿದ ಪಿ.ಆರ್. ತಿಪ್ಪೇಸ್ವಾಮಿಯವರು ಎಲ್ಲ ಕಲಾಪ್ರೇಮಿಗಳಿಗೆ ದೊಡ್ಡ ಉಪಕಾರವನ್ನೇ ಮಾಡಿದ್ದಾರೆ. ಅವರದು ನಿಸ್ವಾರ್ಥ ಸೇವೆ.

ಗಂಜೀಫಾ ಕಲೆಯಿಂದಾಗಿ ನನ್ನ ಸಹೋದರನೇ ಆಗಿಬಿಟ್ಟಿರುವ ರಘುಪತಿ ಭಟ್ಟರು ಈ ಪುಸ್ತಕದ ಚೆಲುವಿಗೆ, ಸತ್ತ್ವಕ್ಕೆ ಪೂರಕವಾಗಿ ಮಾಡಿದ ಸಹಕಾರ ಅವರ ಕಲಾಸೇವೆಯೇ ಸರಿ. ನನಗೆ ಸಂಪೂರ್ಣವಾಗಿ ಒತ್ತಾಸೆಯಾಗಿ ನಿಂತು ಈ ಪುಸ್ತಕವನ್ನು

ಸಿದ್ಧಗೊಳಿಸಲು ಸ್ಫೂರ್ತಿಯಾಗಿ ಬಂದವಳು ನನ್ನ ಪತ್ನಿ ಸುದೇಷ್ಣಾ. ಪ್ರಕಟಿಸಿದ ಅಕಾಡೆಮಿಯ ಸಿಬ್ಬಂದಿಗೂ ಮುದ್ರಕರಿಗೂ ನಾನು ಋಣಿ.

ಸಂತೋಷಕುಮಾರ ಗುಲ್ವಾಡಿ

ಅಕ್ಟೋಬರ 2, 1994
'ರತ್ನಕಲಾ'
ಅನಂತನಗರ
ಮಣಿಪಾಲ 576 119



ಅನುಕ್ರಮಣಿಕೆ ಪುಟಸಂಖ್ಯೆ





# ವರ್ಣಚಿತ್ರದ ಶೀರ್ಷಿಕೆಗಳು

I **ಶ್ರೀ ರಂಗನಾಥ**

*ರಘುಪತಿ ಭಟ್ - ಮೈಸೂರು ಶೈಲಿ*

II **ಪುರಿ ಜಗನ್ನಾಥ**

*ಒರಿಸ್ಸಾದ ಮುಘಲ್ ದರಬಾರ್ ಕಲಂ*

III **ರವಿ ರಾಜ (ಸೂರ್ಯ)**

*ಸಾವಂತವಾಡಿಯ ನವಗ್ರಹ ಗಂಜೀಫಾ*

IV **ಬಂಗಾಳ (ವಿಷ್ಣುಪುರ)**

*ನರಸಿಂಹ ದಶಾವತಾರ ಗಂಜೀಫಾ*

V **ರಾಜಸ್ತಾನದ ಶ್ರೀನಾಥಜಿ**

VI **ಕಾಶ್ಮೀರ ಗಂಜೀಫಾ**

*ನಕ್ಷ್ ಶೈಲಿ ಪರ್ಸಿಯಾ ಪ್ರಭಾವ*

VII **ನೇಪಾಲ**

*ವಾಮನಾವತಾರ (ದಶವತಾರ) ಬೌದ್ಧ ಪ್ರಭಾವ*

VIII **ಗಂಜೀಫಾ ಪೇಟಿಕಾ (ಪೆಟ್ಟಿಗೆ)**

*ಸೋನೆಪುರ, ಒರಿಸ್ಸ*



## ಹ್ರಸ್ವಮಾನೇನ ವಿಶ್ವಂ

ಶ್ರೀಮತ್ ಭಾಗವತದಲ್ಲಿ ಶ್ರೀ ಕೃಷ್ಣನು ತನ್ನ ಪುಟ್ಟದಾದ, ದುಂಡಗಾದ ಬಾಯಲ್ಲಿ ಬ್ರಹ್ಮಾಂಡ ತೋರಿಸಿದ, ವಿಶ್ವರೂಪ ದರ್ಶನ ಮಾಡಿಸಿದ, ಮೂರು ಲೋಕಗಳನ್ನು ಕಾಣಿಸಿದ ಎಂದಿದೆ. ಅದನ್ನೇ ಪುರಂದರದಾಸರು-

ಮಗುವೆ ಬಾ ಬಾ ಎಂದು ಬಣ್ಣಿಸಿ ಕರೆದಳು
ಮಗುವಿನ ಬಾಯ ಶೋಧಿಸಿದಳು ಬೇಗನೆ
ಬಾಯಲಿ ಕಂಡಳು ಹದಿನಾಲ್ಕು ಲೋಕವ
ಕಾಯ ಮರೆತಳಯ್ಯ ಮರುಳಿಗೆ ವಶವಾಗಿ

ಎಂದು ತನ್ನ ಹಾಡಿನಲ್ಲಿ ವರ್ಣಿಸಿದ್ದಾರೆ. ಬ್ರಹ್ಮಾಂಡವನ್ನು ಬಾಯಲ್ಲಿ ತೋರಿಸಿದ ಈ ಅದ್ಭುತ ರಮ್ಯವನ್ನು ಅಷ್ಟೇ ಭಾವನಾತ್ಮಕವಾಗಿಯೂ ಅವರು ಹಾಡಿದ್ದಾರೆ-

ಒಂದು ಕುಚವನುಣಿಸುತ ಮತ್ತೊಂದು ಕುಚವ ಪಿಡಿದು
ಸಂದಿಲಿ ಮೊಗವನಾಲೋಕಿಸುತ
ಚಂದದಿ ಕಿರುನಗೆಯಿಂದ ಬೊಮ್ಮಾಂಡವ
ಅಂದು ಬಾಯೊಳು ತೋರಿದ ಕೃಷ್ಣ ಬಾರೆಂದು

ಹೀಗೆ ಮಾನವನ ಮನಸ್ಸು ಕಿರಿದುದರಲ್ಲಿ ಹಿರಿದನು ಕಂಡಿತು. 'ಸ್ವಲ್ಪಂವೃತ್ತ ವಿಚಿತ್ರಮರ್ಥ ಬಹುಳಂ' ಎಂದು ವರಾಹಮಿಹಿರ ಹೇಳಿದಂತೆ ವ್ಯಷ್ಟಿಯಿಂದ ಸಮಷ್ಟಿಯನ್ನು ಅನ್ವೇಷಿಸಲು, ಅನುಭವಿಸಲು, ಆನಂದಿಸಲು ತವಕಿಸುತ್ತಲೇ ಇರುತ್ತದೆ ಮಾನವ ಪ್ರವೃತ್ತಿ. ಗಂಜೀಫಾ ಎಲೆಗಳ ಮೂಲವೂ ಇಂಥ ಹುಡುಕಾಟದ ಫಲವೇ ಆಗಿದೆ.

ಸಂಸ್ಕೃತದಲ್ಲಿ 'ಕ್ರೀಡಾಪತ್ರ', ಮೈಸೂರು ಕಡೆ ಕನ್ನಡದಲ್ಲಿ 'ದೇವರ ಆಟ'ಎನಿಸಿದ ಈ ಎಲೆಗಳ ಆಟಕ್ಕೆ ಗಂಜೀಫಾ ಎಂಬ ಪರ್ಷಿಯನ್ ಶಬ್ದದ ನಾಮಕರಣವಾದದ್ದು ಮುಘಲರ ಕಾಲದಲ್ಲಿ. ಎಲೆಗಳ ಆಟವೇ ಮುಂದೆ ಅರಬ ದೇಶಗಳ ಮೂಲಕ ಫ್ರಾನ್ಸಿಗೆ ಹೋಗಿ, ಸುಮಾರು 300 ವರ್ಷಗಳ ಹಿಂದೆ ಇಸ್ಪೀಟು ಆಟವಾಗಿ ರೂಪಾಂತರಗೊಂಡಿತು. ಅದು ಭಾರತಕ್ಕೆ ಮರಳಿ ಬಂದು, ವಿದೇಶೀ ಮೋಹಕ್ಕೆ ಒಳಗಾದ ಭಾರತದಲ್ಲಿ ಇಲ್ಲಿಯ ಸ್ವದೇಶೀ ಎಲೆಗಳ ಆಟಗಳನ್ನೇ ನಿರ್ನಾಮ ಮಾಡಿತು. ಈ ಎಲೆಗಳ ಅದ್ಭುತ ಸೃಷ್ಟಿಮಾಡುತ್ತಿದ್ದ ಕಲಾವಿದರೂ ಖಲಾಸ್ ಆದರು.

ವೇಷ ಬದಲಾಯಿತು. ಆಟ, ಆಕಾರ ಬದಲಾಯಿತು. ಮುದ್ರಣ ಶೃಂಗಾರವೂ ಬಂತು. ಆದರೆ ಕೈಯ ಕೌಶಲದ ಕಲೆ ಸಾಯಲಿಲ್ಲ. ಗಂಜೀಫಾ ಕಲೆ ಉಳಿಯಿತು. ಫೀನಿಕ್ಸ್ ಹಕ್ಕಿಯಂತೆ ಬೂದಿಯಿಂದ ಎದ್ದು ಬಂದು ಹಾರಿತು. ಗಂಜೀಫಾ ಕಲೆಯ ರೋಚಕ ಕತೆಯಿದು.

ಭಾರತೀಯ ಕಲೆಗಳಲ್ಲಿ ಅತ್ಯಂತ ವಿಶಿಷ್ಟವಾದುದು ಚಿಕಣಿ ಚಿತ್ರಕಲೆ (MINIATURE PAINTING). ಜಗತ್ತಿನಲ್ಲೆಲ್ಲ 'ಇದು ಭಾರತೀಯ ಚಿತ್ರಕಲೆ' ಎಂದು ಗುರುತಿಸುವುದು ಈ ಚಿಕಣಿ

ಚಿತ್ರಕಲೆಯಿಂದಲೇ. ಅದರ ವರ್ಣವಿನ್ಯಾಸ, ರೇಖೆಗಳು, ಜಲವರ್ಣ ಮಾಧ್ಯಮ ಅಪ್ಪಟ ಭಾರತೀಯ. ಗಂಜೀಫಾ ಚಿತ್ರಕಲೆ ಇನ್ನಷ್ಟು ಸೂಕ್ಷ್ಮ. ಚಿಕಣಿ ಚಿತ್ರಕಲೆಯಲ್ಲಿ ಪ್ರಕೃತಿ, ಶೃಂಗಾರ, ಪ್ರಣಯ, ಪಶು-ಪಕ್ಷಿ, ಸಂಗೀತ, ಋತುಗಳು, ರಾಗ-ರಾಗಿಣಿಯರು, ಅರಸು-ಅರಸಿಯರು, ಅವರ ಕ್ರೀಡೆ, ಆಮೋದ-ಪ್ರಮೋದ-ವಿಹಾರ-ವಿರಹಗಳು ಕಾಣಿಸಿದರೆ ಗಂಜೀಫಾ ಹಲವು ಹೊಸ ಆಯಾಮಗಳನ್ನು ಸೃಷ್ಟಿಸಿತು.

ಈ ಜೀವನವೇ ದೇವರ ಆಟ. ಜೀವ-ಶಿವರ ಸಂಬಂಧಗಳ ಆಟವನ್ನು ಮಾನವನು ಹಲವು ರೀತಿಗಳಲ್ಲಿ ಆಡುತ್ತ ಬಂದಿದ್ದಾನೆ. ಅದಕ್ಕೆ ದೇವರದ್ದೇ ಆಟವಾದ ನಿಸರ್ಗದಿಂದ ಸ್ಫೂರ್ತಿ ಪಡೆದಿದ್ದಾನೆ. ಮಾನವನ ಎಲ್ಲ ಚಟುವಟಿಕೆಗಳಿಗೂ ಅದೇ ನಾಂದಿ. ಅದೇ ಸ್ಫೂರ್ತಿ. ಸಾಹಿತ್ಯ, ಸಂಗೀತ, ನೃತ್ಯ,ಕಲೆ, ಶಿಲ್ಪಗಳಿಗೆಲ್ಲ ಅದೇ ಮೂಲ.

ಈ ಬದುಕೇ ಆಟ. ಅದು ನಮ್ಮ ಭಾಷೆಯಲ್ಲೇ ನಮಗರಿವಿಲ್ಲದಂತೆಯೇ ಹೇಗೆ ಅಭಿವ್ಯಕ್ತಗೊಂಡಿದೆ ನೋಡಿ. ಕೂಗಾಟ, ಬಯಲಾಟ, ನರಳಾಟ, ಒಡನಾಟ, ಓಡಾಟ, ತುಂಟಾಂಟ, ಕೊಂಡಾಟ, ಇತ್ಯಾದಿ ಶಬ್ದಗಳಲ್ಲೇ ಅದರ ವ್ಯಾಪಕತ್ವ ಸ್ಪಷ್ಟ. ಅಂಥ ಜೀವನದ ಹಲವು ಆಟಗಳಲ್ಲಿ ಕ್ರೀಡಾಪತ್ರ, ದೇವರ ಆಟ, ಗಂಜೀಫಾ ಸಾಂಕೇತಿಕವಾದ ಒಂದು ಕಲೆ. ಆಟ ಮತ್ತುಕಲೆ ಒಂದಕ್ಕೊಂದು ಪೂರಕ. ಅವುಗಳ ಸಂಬಂಧ ಅವಿನಾಭಾವ.

ಇಡೀ ಭಾರತೀಯ ಸಂಕೀರ್ಣ ಸಂಸ್ಕೃತಿಯೇ ಗಂಜೀಫಾ ಕಲೆಯಲ್ಲಿ ಅರಳಿದೆ. ವೈದಿಕ ಕಾಲದ ಶ್ರುತಿ -ಸ್ಮೃತಿ, ಉಪನಿಷತ್ತುಗಳು, ಆಗಮಗಳು, ಶ್ರೀಮತ್ ರಾಮಾಯಣ, ಮಹಾಭಾರತ, ಭಗವದ್ಗೀತೆ, ಷಡ್ದರ್ಶನಗಳು, ಪುರಾಣಗಳು,

ಯೋಗದರ್ಶನ, ಜೈನಧರ್ಮ, ಬೌದ್ಧಧರ್ಮ, ಶಾಕ್ತ, ಶೈವ, ವೈಷ್ಣವ, ಗಾಣಪತ್ಯ, ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಭಾರತೀಯ ಪರಧರ್ಮ ಸಹಿಷ್ಣುತೆ, ಧರ್ಮ -ಅರ್ಥ - ಕಾಮ - ಮೋಕ್ಷ ಚಿಂತನೆಗಳೆಲ್ಲವೂ ಗಂಜೀಫಾ ಕಲೆಯಲ್ಲಿ ಸಂಗಮಿಸಿದೆ. ಇಸ್ಲಾಂ ಪ್ರಭಾವವೂ ಸೇರಿಕೊಂಡಿದೆ.

ಶಿಲಾಯುಧಗಳನ್ನು ಬಳಸುತ್ತಿದ್ದ ಆದಿ ಮಾನವನಿಂದ ಇತಿಹಾಸ ಪೂರ್ವ ಕಾಲದಲ್ಲಿ ಗುಹಾಚಿತ್ರಗಳು ನಿರ್ಮಾಣವಾದುವು. ಕೈಮೂರ್ ಮತ್ತು ವಿಂಧ್ಯ ಪರ್ವತದ ಗುಹೆಗಳಲ್ಲಿ, ಮಧ್ಯಪ್ರದೇಶದ ರಾಯಘಡ, ಭೀಮಬೆಟಕಾ, ಮಿರ್ಜಾಪುರ ಜಿಲ್ಲೆಯಲ್ಲಿ ಕಂಡು ಬಂದ ಆದಿಮಾನವನ ಚಿತ್ರಗಳು ಇದುವರೆಗೂ ಭಾರತದಲ್ಲಿ ಕಂಡು ಬಂದ ಪ್ರಾಚೀನ ಕಲೆ.

ಸಿರ್ಗುಜಾದ ರಾಮಘಡ ಬೆಟ್ಟಗಳ ಜೋಗಿಮರಾ ಗುಹೆಗಳಲ್ಲಿ ಕಾಣುವ ಚಿತ್ರಗಳು ಹಾಗೂ ಅಜಂತಾದ ಭಿತ್ತಿ ಚಿತ್ರಗಳು ಕಾಲನಿರ್ಣಯವಾಗಿ ಸುಮಾರು ಕ್ರಿ.ಪೂ. ಒಂದನೆಯ ಶತಮಾನದ ಕಲೆ ಎಂದು ನಿರ್ಧಾರವಾಗಿದೆ. 'ಇದು ಭಾರತೀಯ'ಎಂದು ಗುರುತಿಸಬಹುದಾದ ಕಲಾ ಪರಂಪರೆಗೆ ಇಲ್ಲಿಂದಲೇ ಆರಂಭ. ಗುಪ್ತರ ಕಾಲದಲ್ಲಿ ಭಾರತೀಯ ಕಲೆ ಅತ್ಯಂತ ಉಚ್ಛ್ರಾಯಕ್ಕೇರಿತ್ತು. ಅಲ್ಲಿಂದ ರಜಪೂತ, ಪಲ್ಲವ, ಚೋಳ, ರಾಷ್ಟ್ರಕೂಟ ಹೀಗೆ ವಿಭಿನ್ನವಾಗಿ ಕಾಶ್ಮೀರ - ನೇಪಾಲ - ಟಿಬೇಟ್ ಗಳಿಂದ ಕನ್ಯಾಕುಮಾರಿಯವರಗೆ ಭಾರತೀಯ ಕಲೆ ವೈವಿಧ್ಯಪೂರ್ಣವಾಗಿ ಅರಳಿತು.

ಚಿತ್ರಕಲೆಯ ಬಗ್ಗೆ ಆಗಲೇ ನಮ್ಮಲ್ಲಿ ಶಾಸ್ತ್ರಗ್ರಂಥಗಳು ಬಂದಿದ್ದುವು. ರಾಮಾಯಣ, ಮಹಾಭಾರತ, ಬೌದ್ಧರ ಪಾಳಿಗ್ರಂಥ

'ವಿನಯಪೀಠಕ', ಕಾಳಿದಾಸನ 'ಶಾಕುಂತಲ' ಮತ್ತು 'ಮಾಲವಿಕಾಗ್ನಿಮಿತ್ರ' ಭವಭೂತಿಯ 'ಉತ್ತರರಾಮಚರಿತ್ರೆ' ಮೊದಲಾದುವುಗಳಲ್ಲಿ ಚಿತ್ರಗಳು, ಭಿತ್ತಿಚಿತ್ರಗಳು, ವ್ಯಕ್ತಿಚಿತ್ರ (PORTRAIT) ಗಳ ಬಗ್ಗೆ ಸಾಕಷ್ಟು ವರ್ಣನೆಗಳಿವೆ.

ಭಾರತದಲ್ಲಿರುವಷ್ಟು ಕಲಾವೈವಿಧ್ಯ ಎಲ್ಲೂ ಇರಲಾರದು. ಕಲೆಯ ಬಗ್ಗೆ ಇತಿಹಾಸ ಬರೆದ ತಾರಾನಾಥನು ಆಗ ಚಿತ್ರಕಲೆಯಲ್ಲಿ ದೇವ, ಯಕ್ಷ ಮತ್ತು ನಾಗ ಎಂಬ ಮೂರು ಸಂಪ್ರದಾಯಗಳಿರುವುದಾಗಿ ಉಲ್ಲೇಖಿಸಿದ್ದಾನೆ. ಗುಪ್ತರ ಕಾಲದ 'ಚಿತ್ರಸೂತ್ರ', 'ಕುತ್ತನಿಮಾತ', 'ವಿಷ್ಣುಧರ್ಮೋತ್ತರಂ', 'ಅಭಿಲಾಷಿತಾರ್ಥ ಚಿಂತಾಮಣಿ ', 'ಶಿಲ್ಪರತ್ನ', 'ತಿಲಕಮಂಜರಿ'ಮೊದಲಾದ ಶಾಸ್ತ್ರಗ್ರಂಥಗಳು ಕಲೆಯ ಮಹತ್ವವನ್ನು ಸಾರಿದುವು. ಕಲೆಗಳು ಜೀವನದ ಭಾಗವೇ ಆಗಿದ್ದವು. ಆರವತ್ತನಾಲ್ಕು ಕಲೆಗಳೆಂದು ಆಗಲೇ ವಿಂಗಡಿಸಿ, ಪ್ರತಿಯೊಂದನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುತ್ತಿದ್ದರು. ಇಂಥ ಒಂದು ಬೃಹತ್ ಪರಂಪರೆಯಲ್ಲಿ, ಮಹತ್ವದ ಹಿನ್ನಲೆಯಲ್ಲಿ ಗಂಜೀಫಾ ಕಲೆ ಬೆಳೆದು ಬಂತು.

ಈ ಬೆಳವಣಿಗೆಯಲ್ಲಿ ಆಗಾಗ ಆಘಾತಗಳಾದುವು. ಕಲೆಗಳಿಗೆ ಸಂಚಕಾರ ಬಂತು. ಮಾನವನ ಸೃಜನಶೀಲತೆ, ಭಾವನೆ, ಕಲೆಗಳು ಒಂದು ಕಡೆಯಾದರೆ, ಅಧಿಕಾರ, ಸ್ವಾರ್ಥ, ಸಂಘರ್ಷಗಳು ಇನ್ನೊಂದೆಡೆ. ಇವುಗಳ ನಡುವಿನ ಹೋರಾಟವೂ ಒಂದು ಆಟವಾಯಿತು. ತನಗೆ ತಾನೇ ಶತ್ರುವಾದ, ತನಗೆ ತಾನೇ ಮಿತ್ರನಾದ. ಈ ಒಡನಾಟ ನಿರಂತರವಾಗಿ ಸಾಗುತ್ತಿದೆ.

ಯಂತ್ರಗಳನ್ನು ಮಾನವನೇ ನಿರ್ಮಿಸಿದನು. 'ಕುಲದ ಕಾವು, ಕೊಡಲಿ ಯೇಟಿನಿಂದ ಸಾವು' ಎಂಬಂತೆ ಯಂತ್ರಗಳೇ ಮಾನವನ ಸೃಜನಶೀಲತೆಗೆ ಅಡ್ಡಿಯಾದುವು. ಅವನೇ ಯಂತ್ರವಾಗಿಬಿಟ್ಟ. ಆದರೆ ಬೇಗನೆ ಚೇತರಿಸಿಕೊಂಡ. ಸತ್ತ, ಅರೆಸತ್ತ ಸೃಜನಶೀಲತೆಯನ್ನು ಪುನರ್ನವಗೊಳಿಸಿದ. ಯಂತ್ರಗಳನ್ನು ಮೀರಿ ಮಾನವನು ಬೆಳೆದ. ಹಸ್ತಕೌಶಲಕ್ಕೆ ಮತ್ತು ಮಾನವನ ಸೃಜನಶೀಲತೆಯ ಸೃಷ್ಟಿಗೆ ಸರಿಸಾಟಿಯಾದುದು ಯಾವುದೂ ಇಲ್ಲ. ಗಂಜೀಫಾ ಕಲೆ ಇದಕ್ಕೆ ಜೀವಂತ ಸಾಕ್ಷಿ.







## ಮುಘಲರ ಕಾಲದಲ್ಲಿ *

ಗಂಜೀಫಾ ಎಂಬ ಶಬ್ದ ಬಂದದ್ದೇ ಮುಘಲರ ಕಾಲದಲ್ಲಿ. ಇರಾಣದಿಂದ ಈ ಪರ್ಷಿಯನ್ ಶಬ್ದ ಬಂದಿತು ಎಂಬುದು ಇತಿಹಾಸಕಾರರ ಊಹೆ.

ಗಂಜ್ ಅಂದರೆ ಖಜಾನೆ, ನಿಕ್ಷೇಪ, ನಿಧಿ, ದ್ರವ್ಯ ಮೊದಲಾದ ಅರ್ಥಗಳು ಬರುತ್ತವೆ. ಹಣವನ್ನು ಪಣವನ್ನಾಗಿ ಇಟ್ಟು ಆಡುವುದೇ ಗಂಜೀಫಾ ಆಯಿತು. ಬಾದಷಹರು, ಅವರ ವಝೀರರು, ಶ್ರೀಮಂತರು ಈ ಆಟವನ್ನು ವಿನೋದವಾಗಿ ವೇಳೆ ಕಳೆಯಲು ಆಡುತ್ತಿದ್ದರು. ಪಗಡೆ, ಚದುರಂಗಗಳಂತೆಯೆ ಗಂಜೀಫಾ ಎಲೆಗಳ ಆಟಕ್ಕೆ ಮುಘಲ್ ಅರಸರು, ಮಂತ್ರಿಗಳು ಪ್ರೋತ್ಸಾಹ ಕೊಟ್ಟರು. ವಿಲಾಸೀ ಜೀವನದ ಒಂದು ಭಾಗವಾದ ಗಂಜೀಫಾ ತನ್ನ ಮೂಲ ಸ್ವರೂಪವನ್ನು ಬದಲಾಯಿಸಿಕೊಂಡಿತು. 'ದೇವರ ಆಟ'ವಾಗಿದ್ದುದು ಈಗ ರಾಜದರ್ಬಾರಕ್ಕೆ ಬಂದು ಮಜ ಮಾಡುವ ಸಾಧನೆಯಾಯಿತು. ಆದರೊಂದಿಗೆ ಈ ಆಟ 'ಅವಲಕ್ಷಣ', 'ಮನೆಗೆ ಮಾರಿ', 'ಕಲಿ'ಎಂದೆನ್ನಿಸಿತು.

* ತುರ್ಕ ಮತ್ತು ಮಂಗೋಲ ಮೂಲದ ಮುಘಲರು ಕ್ರಿ.ಶ. 1526 ರಿಂದ1858ರವರೆಗೆ ಭಾರತ ಆಳಿದರು.

ಜನಸಾಮಾನ್ಯರ ಆಟ ರಾಜ ಮಹಾರಾಜರಲ್ಲಿಗೆ ಬಂತು. ಕಲೆ ಮಾತ್ರ ಜನಸಾಮಾನ್ಯರಲ್ಲೇ ಉಳಿಯಿತು. ಕಲೆಗೆ, ಕಲಾವಿದರಿಗೆ ಪೋಷಣೆಯಾಯಿತು. ಪ್ರೋತ್ಸಾಹವೂ ಸಿಕ್ಕಿತು.

'ಕ್ರೀಡಾಪತ್ರ'ವಾಗಿ ಆಟವಾಡುತ್ತಿದ್ದ, ಮುಘಲರಿಗಿಂತ ಮೊದಲಿನ ಕಾಲದಲ್ಲಿ ದೇವರು, ಪುರಾಣ ಮೊದಲಾದುವು ಈ ಆಟಕ್ಕೆ ಸ್ಫೂರ್ತಿ. ಶಿವನ ಡಮರು, ವಿಷ್ಣುವಿನ ಶಂಖ, ಚಕ್ರ, ಅಷ್ಟದಿಕ್ಪಾಲಕರು (ಇಂದ್ರ, ಯಮ, ವರುಣ, ಕುಬೇರ, ಅಗ್ನಿ, ನಿರುತಿ, ವಾಯು, ಸೋಮ),ಸಂಖ್ಯಾಶಾಸ್ತ್ರ, ದಶಾವತಾರ ಇತ್ಯಾದಿ ಚಿತ್ರಗಳಿಂದ ಎಲೆಗಳು ಅಲಂಕೃತವಾಗುತ್ತಿದ್ದುವು.

ಮುಘಲರ ಕಾಲದಲ್ಲಿ (332 ವರ್ಷಗಳ ಆಳ್ವಿಕೆಯಲ್ಲಿ) ಈ ಆಟ ಹೆಚ್ಚಿನ ಆಯಾಮ ಪಡೆಯಿತು. ಹಿಂದುಸ್ಥಾನೀ ಸಂಗೀತದಂತೆ, ಕಥಕ್ ನೃತ್ಯದಂತೆ ದರ್ಬಾರಕ್ಕೆ ಬಂದ ಕಲೆಗೆ ಹೊಸ ಕಳೆ ಬಂತು. ಈ ಆಟದಲ್ಲಿ ರಾಜಕೀಯ ವಿಚಾರಧಾರೆ -ಪಿತೂರಿ, ವ್ಯೂಹರಚನೆ, ಷಡ್ಯಂತ್ರಗಳು ಸೂಕ್ಷ್ಮರೂಪ ದಲ್ಲಿ ಸೇರಿದುವು. ರಾಜ (ಷಾ/ನೃಪ), ಸೇನಾಧಿಪತಿ, ಮಂತ್ರಿ (ಗುಲಾಮ, ಮಿರ್, ವಝೀರ್)ಸೇರಿದರು. ಚದುರಂಗ ಆಟದಂತೆ 'ರಾಜಕೀಕರಣ' ಗೊಂಡಿತು. ಆದರೆ ಅದರ ಮೂಲ ಸತ್ವವಾದ ದೈವಿಕ ಚೇತನ ಪೂರ್ಣವಾಗಿ ಹೋಗಲಿಲ್ಲ. ರಾಜ ದರಬಾರಕ್ಕೆ ಬರುವುದರೊಂದಿಗೆ ಗಂಜೀಫಾ ಕಲಾವಿದರಿಗೆ ಪ್ರೋತ್ಸಾಹ ಹೆಚ್ಚಾಗಿ ಸಿಗಲಾರಂಭವಾಯಿತು. ದರಬಾರದ ಹಲವರು ಈ ಆಟಗಳನ್ನು ಕರತಲಾಮಲಕ ಮಾಡಿಕೊಂಡರು. ಸಾಮಾನ್ಯ ಜನರು, ಮಧ್ಯಮ ವರ್ಗದವರೂ ಈ ಆಟ ಆಡತೊಡಗಿದರು.

ಮುಘಲರ ಕಾಲದಲ್ಲಿ ಗಂಜೀಫಾ ಕಲೆಯಲ್ಲಿ ಹಲವು ಹೊಸ ಪ್ರಯೋಗಗಳೇ ಆದುವು. ಪುರಾಣ, ಇತಿಹಾಸ ಕಾಲದಿಂದ

ಕಲಾವಿದರು ವರ್ತಮಾನಕ್ಕೂ ಇಳಿದರು. ಇಸ್ಲಾಂ ನಿಸರ್ಗವನ್ನು ಚಿತ್ರಿಸುವುದನ್ನು ನಿಷೇಧಿಸಿದೆ. ಆದರೆ ಕಲೆಗೆ ಮುಘಲರ ಕಾಲದಲ್ಲಿ ದೊರೆತಷ್ಟು ಪ್ರೋತ್ಸಾಹ ಹಿಂದೆಂದೂ ಸಿಕ್ಕಿರಲಿಲ್ಲ. ಭಾರತೀಯ ಮನಸ್ಸು, ವಸ್ತು ಹಾಗೂ ಪರ್ಷಿಯನ್ ಕಲಾತಂತ್ರ ನೈಪುಣ್ಯ ಚಿಕಣಿ ಚಿತ್ರಕಲೆಯಲ್ಲಿ, ಗಂಜೀಫಾ ಎಲೆಗಳಲ್ಲಿ ಬೆಸೆಯಿತು. ಭಾರತದ್ದೇ ಆದ ಈ ವಿಶಿಷ್ಟ ಕಲೆಯನ್ನು ರೆಂಬ್ರಾಂಟ್‌ನಂಥ ಪಾಶ್ಚಾತ್ಯ ಕಲಾವಿದರೂ ಮೆಚ್ಚಿಕೊಂಡು, ಅನುಕರಿಸಿದುದು ಇದೆ.

ಮುಘಲ್ ಸಾಮ್ರಾಜ್ಯಕ್ಕೆ ಪಂಚಾಂಗ ಹಾಕಿದ ಬಾಬರ್ ಪರ್ಷಿಯನ್ ಪ್ರೇಮಿ . ಹುಮಾಯೂನನು ಪರ್ಷಿಯಾದಲ್ಲೇ ನಾಲ್ಕು ವರ್ಷಗಳಿದ್ದು ಭಾರತದ ವೈವಿಧ್ಯಕ್ಕೆ ಅನುಗುಣವಾಗಿ ಗಂಜೀಫಾ ಕಲೆಯನ್ನು ಪ್ರೋತ್ಸಾಹಿಸಿದನು. ಉದಾತ್ತಭಾವನೆಗಳ ಅಕ್ಬರನಂತೂ ಸ್ವತಃ ಚಿತ್ರಕಲೆ ಅಭ್ಯಾಸ ಮಾಡುವಲ್ಲಿಯವರೆಗೂ ಅದರ ಪೋಷಕನಾದ. ಅವನು ಭಾರತದ ಹಲವು ಕಡೆಗಳಿಂದ ಸುಮಾರು 150 ಮಂದಿ ಕಲಾವಿದರನ್ನು ತನ್ನ ದರಬಾರಿಗೆ ಕರೆಸಿ ಅವರಿಗೆ ಆಶ್ರಯ ಕೊಟ್ಟ ದಾಖಲೆಗಳಿವೆ. “ಕಲಾವಿದ ದೇವರನ್ನು ಅತ್ಯಂತ ಹತ್ತಿರದಿಂದ ಕಾಣುವ ಭಾಗ್ಯಶಾಲಿ. ಪವಿತ್ರಖುರಾನಿನ ಸ್ಫೂರ್ತಿಯಿಲ್ಲದೆ ಅಂಥ ಸೃಷ್ಟಿ ಸಾಧ್ಯವೆ?” ಎಂದು ಅಕ್ಬರ್ ಉದ್ಗರಿಸಿದುದಿದೆ.

ಮುಘಲರ ಕಾಲದಲ್ಲಿ ಗಂಜೀಫಾ ಕಲೆ ಪ್ರವರ್ಧಮಾನಕ್ಕೆ ಬಂತು ಎಂಬುದಕ್ಕೆ ಸಾಕ್ಷಿಯಾಗಿರುವಂತೆ ಹಲವು ದಾಖಲೆಗಳು ಸಿಗುತ್ತವೆ. 'ಬಾಬರ್‌ನಾಮಾ'ದಲ್ಲಿ ಗಂಜೀಫಾ ಉಲ್ಲೇಖವಿದೆ. ''ಕಾಬೂನೆ ಇಸ್ಲಾಂ', 'ಐನ್ - ಈ - ಅಕ್ಬರಿ' ಯಲ್ಲಿ ಗಂಜೀಫಾ ಕುರಿತು ವಿವರಗಳಿವೆ.

ಗಂಜೀಫಾ ಎಲೆಗಳ ಚಿತ್ರರಚನೆಯಲ್ಲಿ ಮುಘಲ್ ಕಾಲಕ್ಕೆ ಹಲವು ಹೊಸ ಪ್ರಯೋಗಗಳಾದುವು. ಅದುವರೆಗೆ ಹಿಂದು ದೇವ-ದೇವತೆಗಳ ಚಿತ್ರಗಳಿದ್ದ ಕಡೆ ಈಗ ಸೈನ್ಯ, ಆಯುಧ, ವಾಹನ, ಪಶು-ಪಕ್ಷಿಗಳೂ ಚಿತ್ರಿತವಾಗಿ ಹೊಸ ಹೊಸ ಆಟಗಳು ಬೆಳೆದುವು. ಅರಸರ ಖುಷಿಯ ದ್ಯೋತಕವಾಗಿ ನಗ್ನ ಸುಂದರಿಯರ ಚಿತ್ರಗಳು ಸಹ ಈ ಎಲೆಗಳಲ್ಲಿ ಮೂಡಿ ಬಂದುವು. ಚಿತ್ರರಚನಾ ಕಾರ್ಯಕ್ಕೆ ಹೆಚ್ಚಿನ ಪ್ರಾಧಾನ್ಯ ಬರಲಿಕ್ಕೆ ಇದೂ ಒಂದು ಕಾರಣವಿರಬಹುದು.

ಅದುವರೆಗೆ ಕೇವಲ ದುಂಡು ಆಕಾರದಲ್ಲಿದ್ದ ಗಂಜೀಫಾ ಎಲೆಗಳು ಚೌಕ, ಆಯತ, ಅಂಡಾಕಾರದಲ್ಲೂ ಬಂದವು. ಎಲೆಗಳ ಕಟ್ಟನ್ನು ಜೋಪಾನವಾಗಿ ರಕ್ಷಿಸಿಡುವಂತೆ ಸುಂದರ, ಆಕರ್ಷಕ ಪೆಟ್ಟಿಗೆಗಳನ್ನೂ ತಯಾರಿಸಿ, ಆ ಪೆಟ್ಟಿಗೆಗಳ ಮೇಲೂ ಚಿತ್ರರಚನೆ ಮಾಡಿದರು. ಕಲಾವಿದರಿಗೆ ಹೆಚ್ಚು ಹೆಚ್ಚು ಕೆಲಸ ಸಿಗಲಾರಂಭವಾಯಿತು.

ಹಸ್ತಿದಂತ, ಎಲುಬು, ಮುತ್ತಿನ ಚಿಪ್ಪು, ಆಮೆ ಚಿಪ್ಪು, ಗಂಧಗಳಿಂದ ಮೂಲತಃ ಗಂಜೀಫಾಗಳನ್ನು ತಯಾರಿಸುತ್ತಿದ್ದರು. ಈ ವಸ್ತುಗಳು ಕೇವಲ ರಾಜಮಹಾರಾಜರುಗಳಿಗಷ್ಟೆ ಎಟಕುತ್ತಿದ್ದುವು. ರಾಜಮಹಾರಾಜರ ಸಂಪರ್ಕವಿದ್ದ ಶ್ರೀಮಂತರು ಈ ಆಟವಾಡುತ್ತಿದ್ದಿರಬೇಕು. ಅಲ್ಲಾವುದ್ದೀನ್ ಖಿಲ್ಜಿ ದೆಹಲಿಯನ್ನು ಆಳುವಾಗ ಕವಿ, ಸಂಗೀತಗಾರ ಅಮೀರ್ ಖುಸ್ರು ಅವನ ಆಸ್ಥಾನದಲ್ಲಿದ್ದ. ಅವನು ಪರ್ಶಿಯಾದಿಂದ ಕೈಯಿಂದ ಮಾಡಿದ ಕಾಗದವನ್ನು ಆಮದು ಮಾಡಿಸಿ, ಅದರ ಮೇಲೆ ಚಿಕಣಿ ಚಿತ್ರಕಲೆ ರಚಿಸುವುದಕ್ಕೆ ನಾಂದಿ ಹಾಕಿದನು. ಕಾಗದದ ಉಪಯೋಗ ಚಿಕಣಿಚಿತ್ರಕಲೆ ಹಾಗೂ ಗಂಜೀಫಾ ಕಲೆಯನ್ನು ಬೆಳೆಸಲು ಭಾರಿ ಸಹಕಾರಿಯಾಯಿತು. ಮಧ್ಯಮ ವರ್ಗದವರಿಗೂ ಕಾಗದದ ಈ

ಗಂಜೀಫಾಗಳು ಸಿಗುವಂತಾಯಿತು.

ಗಂಜೀಫಾ ಕಲೆ ನಮ್ಮ ಇಡೀ ದೇಶಗಳಲ್ಲಿ ಹಲವೆಡೆ ಪಸರಿಸಿದೆ. ದೇವಗಿರಿಯ (ಮುಂದೆ ದೌಲತಾಬಾದ್)ರಾಮದೇವ ಅಲ್ಲಾವುದ್ದೀನ್ ಖಿಲ್ಜಿಯ ಸಾಮಂತನಾಗಿದ್ದ. ರಾಮದೇವನು ಖಿಲ್ಜಿಗೆ ಬರೆದು ಅನೇಕ ಕಲಾವಿದರನ್ನು ತನ್ನಲ್ಲಿ ತರಿಸಿಕೊಂಡು ಕಲೆಯನ್ನು ಪೋಷಿಸಿದ ಉಲ್ಲೇಖಗಳು ದೊರೆಯುತ್ತವೆ. ದಕ್ಷಿಣದ ಅಹಮದ್‌ನಗರ, ಬಿಜಾಪುರ, ಗೋಲ್ಕೊಂಡ, ಬೀದರ್, ಗುಲ್ಬರ್ಗ ಸುಲ್ತಾನರ ಕಾಲದಲ್ಲೂ ಚಿಕಣಿ ಚಿತ್ರಕಲೆಗೆ ಪ್ರೋತ್ಸಾಹ ದೊರೆಯಿತು. ಹಿಂದೂ ಪರಂಪರೆ ಮತ್ತು ಮುಘಲ್ ಪ್ರಭಾವ ಇಲ್ಲಿಯೂ ಸಂಗಮಗೊಂಡು ಗಂಜೀಫಾ ಕಲೆಯಲ್ಲಿ ವಿಭಿನ್ನ ಶೈಲಿಗಳು ರೂಪುಗೊಂಡವು. ಬಿಜಾಪುರದ ಆದಿಲ್‌ಷಾ ರಾಜ್ಯವಂಶದಲ್ಲಿ ಸ್ವತಃ ಕವಿ, ಸಂಗೀತಗಾರರಿದ್ದ ರಸಿಕ ಅರಸರಿದ್ದರು. ದಖ್ಖಣೀ ಶೈಲಿಯೊಂದು ಈ ಕಾಲಕ್ಕೆ ವಿಶಿಷ್ಟವಾಗಿ ರೂಪುಗೊಂಡಿತು. ಆ ಕಾಲಕ್ಕೆ ಚಿಕಣಿ ಚಿತ್ರಕಲೆ ಮತ್ತು ಗಂಜೀಫಾ ಎಷ್ಟು ಜನಪ್ರಿಯವಾಯಿತೆಂಬುದಕ್ಕೆ ಇನ್ನೊಂದು ಸಾಕ್ಷಿ ದೌಲತಾಬಾದ್ ಬಳಿ ಇರುವ ಕಾಗಝಿಪುರ ಎಂಬ ಹಳ್ಳಿ. ಇಲ್ಲಿ ಕೈಯಲ್ಲೇ ಕಾಗದ ತಯಾರಿಯಾಗುತ್ತಿತ್ತು. ಕಾಗದದ ಮಾಧ್ಯಮದ ಬಳಕೆಯಿಂದ ಚಿತ್ರಕಲೆಯಲ್ಲಿ ಅದ್ಭುತ ಕ್ರಾಂತಿ ಉಂಟಾಯಿತು. ಹಸ್ತಿದಂತ, ಮುತ್ತು, ಗಂಧಗಳಿಂದ ಕಾಗದಕ್ಕೆ ಬಂದಾಗ ಅಲ್ಲಿ ಜನಸಾಮಾನ್ಯನ ಮೆಚ್ಚಿಗೆಯ ವಿಷಯಗಳೂ ಕಾಣಿಸಿದುವು. ಚಿಡಿಯಾ (ಪಕ್ಷಿ), ಫೂಲಿ (ಪುಷ್ಪ), ಪಾನ್( ಎಲೆ), ಫಲ್ (ಹಣ್ಣು)ಇವೆಲ್ಲವೂ ಕಲಾವಿದರ ಕಾರ್ಯಕ್ಷೇತ್ರದ ಕ್ಷಿತಿಜವನ್ನು ವಿಸ್ತರಿಸಿದುವು.





ಮುಮ್ಮಡಿಯವರ ಮುದ್ರಿನ ಕಲೆ

**ಮೈ**ಸೂರು ಶೈಲಿಯ ಗಂಜೀಫಾ ಕಲೆ ಮತ್ತು ಆಟಗಳು ಇಂದಿಗೂ ಉಳಿದುಕೊಂಡಿದ್ದರೆ ಅದರ ಸಂಪೂರ್ಣ ಶ್ರೇಯಸ್ಸು ಮೈಸೂರು ಸಂಸ್ಥಾನದ 21ನೆಯ ದೊರೆಯಾಗಿದ್ದ ಕಲಾಭಿಮಾನಿ ಮುಮ್ಮಡಿ ಕೃಷ್ಣರಾಜ ಒಡೆಯರ್ (1794 - 1868) ಅವರಿಗೆ ಸೇರಬೇಕು. 'ಕನ್ನಡ ಭೋಜ' ಎಂದೇ ಹೆಸರಾದ ಮುಮ್ಮಡಿಯವರ ಕಾಲಕ್ಕೆ ಸಾಹಿತ್ಯ, ಸಂಗೀತ, ಚಿತ್ರಕಲೆ, ನೃತ್ಯ, ಶಿಲ್ಪ, ಕ್ರೀಡೆ ಎಲ್ಲವೂ ಮೈಸೂರಿನ ವಿಶಿಷ್ಟ ಶೈಲಿಯಲ್ಲಿ ವಿಜೃಂಭಿಸಿದುವು. ಗಂಜೀಫಾ ಕಲೆಯನ್ನು ಅವರು ಉಳಿಸಿ, ಬೆಳೆಸಿ, ರಕ್ಷಿಸಿದರು. ಮೈಸೂರು ಗಂಜೀಫಾ ಎಂದರೆ ಮುಮ್ಮಡಿ ಗಂಜೀಫಾ ಎನ್ನುವಷ್ಟು ಅವರು ಈ ಕಲೆ ಮತ್ತು ಆಟಗಳನ್ನು ಪ್ರೋತ್ಸಾಹಿಸಿದರು.

ಟೀಪು ಸುಲ್ತಾನನ ಕಾಲಕ್ಕೆಯೇ ಮೈಸೂರಿನಲ್ಲಿ ಗಂಜೀಫಾ ಕಲೆ, ಆಟ ಎರಡೂ ಇದ್ದವು. ಆದರೆ ನಿತ್ಯ ನಿರಂತರ ಯುದ್ಧ ಮತ್ತು ಬ್ರಿಟಿಷರ ವಿರುದ್ಧ ಹೋರಾಟಗಳಲ್ಲೇ ನಿರತನಾದ ಟೀಪುವಿಗೆ ಚಿತ್ರಕಲೆಗಳ ಬಗ್ಗೆ ಹೆಚ್ಚು ಗಮನ ಕೊಡುವುದು ಆಗಲಿಲ್ಲ. ಟೀಪುವನ್ನು ಬ್ರಿಟಿಷರು ಮೆ 4, 1799ರಲ್ಲಿ ಶ್ರೀರಂಗಪಟ್ಟಣದಲ್ಲಿ ಅವನ ಮಂತ್ರಿ ಮೀರ್‌ಸಾದಕನ ಪಿತೂರಿಯ ಸಹಾಯದಿಂದ

ಕೊಂದು ಮೈಸೂರನ್ನು ವಶಪಡಿಸಿಕೊಂಡರು. ಅಲ್ಲಿಗೆ ಹೈದರ್ ಅಲಿ ಮತ್ತು ಟೀಪುವಿನ 30 ವರ್ಷಗಳ ಮೈಸೂರು ಆಳ್ವಿಕೆ ಕೊನೆಗೊಂಡಿತು. ಮೈಸೂರನ್ನು ಮತ್ತೆ ಯದುವಂಶದ ಮೈಸೂರು ಅರಸರಿಗೇ ಒಪ್ಪಿಸುವುದೆಂದು ಬ್ರಿಟಿಷರು ತೀರ್ಮಾನಿಸಿದರು. ಜೂನ್ 30,1799 ರಂದು ಮೈಸೂರಿನ ಲಕ್ಷ್ಮೀರಮಣ ದೇವಾಲಯದಲ್ಲಿ ನಂಜರಾಜ ಒಡೆಯರ್ ನಾಮಾಂಕಿತ ಮುಮ್ಮಡಿಯವರಿಗೆ ಪಟ್ಟಾಭಿಷೇಕವಾಯಿತು. ಆಗ ಅವರಿಗೆ ಕೇವಲ ಐದು ವರ್ಷ ವಯಸ್ಸು. ಅವರಿಗೆ ಕೃಷ್ಣರಾಜ ಒಡೆಯರ್ ಎಂಬ ಹೆಸರನ್ನು ಕೊಟ್ಟು, ಅವರನ್ನು ಮುಂದಿಟ್ಟು ಅಜ್ಜಿ ಲಕ್ಷ್ಮಮ್ಮಣ್ಣಿ, ತಾಯಿ ಕೆಂಪನಂಜಮ್ಮಣ್ಣಿ ಹಾಗೂ ದಿವಾನ್ ಪೂರ್ಣಯ್ಯನವರು ರಾಜ್ಯಭಾರ ಮಾಡಿದರು.

ವಾಸ್ತವಿಕವಾಗಿ ಮುಮ್ಮಡಿಯವರಿಗೆ ರಾಜ್ಯಭಾರ ಮಾಡುವ ಹೆಚ್ಚಿನ ಜವಾಬ್ದಾರಿ ಹೊರುವ ಕೆಲಸವೇ ಕಡಿಮೆಯಾಯಿತು. ಅವರಿಗೆ 16 ವರ್ಷವಾದಾಗ ಸ್ವತಃ ರಾಜ್ಯಭಾರ ಆರಂಭಿಸಿದರು. ಆದರೂ ಅವರಿಗೂ ದಿವಾನ್ ಪೂರ್ಣಯ್ಯ ಮತ್ತು ಅವರ ಬಳಿಕ ಬಂದ ದಿವಾನರು, ಬಕ್ಷಿಗಳಿಗೆ ಸರಿಹೊಂದಿಕೆಯಾಗಲಿಲ್ಲ. ಇದನ್ನು ಕಂಡು ಬ್ರಿಟಿಷರು 1831 ಅಕ್ಟೋಬರ 13 ರಂದು ಅವರಿಂದ ರಾಜ್ಯಾಧಿಕಾರವನ್ನು ಕಸಿದುಕೊಂಡು ತಾವೇ ನಡೆಸಲಾರಂಭಿಸಿದರು. ಈ ನೋವು ಅವರಿಗೆ ಕೊನೆಯ ತನಕವೂ ಇತ್ತು. ಆದರೆ ಇದರಿಂದ ಮೈಸೂರಿನ ಸಾಹಿತ್ಯ, ಸಂಗೀತ, ಕಲೆ, ಶಿಲ್ಪ, ಕ್ರೀಡೆಗಳಿಗೆ ಭಾರೀ ಪ್ರೋತ್ಸಾಹ ಸಿಕ್ಕಿತು. ಆಡಳಿತದ ತಲೆನೋವು ಮುಮ್ಮಡಿಯವರನ್ನು ಬಾಧಿಸಲಿಲ್ಲ. ಚಾಮುಂಡೀ ಭಕ್ತರಾದ ಮುಮ್ಮಡಿಯವರು ಲಲಿತಕಲೆಗಳಿಗೆ ಮಹಾಪೋಷಕರಾದರು. ಅವುಗಳಲ್ಲೇ ಹೆಚ್ಚು ಕಾಲವನ್ನು ಉಪಯುಕ್ತವಾಗಿ ಕಳೆದರು.

ಈ ಮೊದಲೇ ಕಲಾಕೇಂದ್ರಗಳಾಗಿದ್ದ ಮೈಸೂರು, ಶ್ರೀರಂಗಪಟ್ಟಣ, ನಾಗಮಂಗಲ, ನಂಜನಗೂಡು, ಚನ್ನಪಟ್ಟಣ ಮೊದಲಾದ ಕಡೆಗಳಲ್ಲಿ ವಿವಿಧ ಕಲೆಗಳು ಬೆಳೆಯಲು ಅವಕಾಶವಾಯಿತು. ಮುಮ್ಮಡಿಯವರ ಒಟ್ಟು ಕಲಾಪ್ರೇಮದಲ್ಲಿ ಗಂಜೀಫಾ ಕಲೆ ಮತ್ತು ಆಟಗಳು ವಿಶಿಷ್ಟವಾಗಿ, ಸಮರ್ಥವಾಗಿ ಅರಳಿದುವು.

ಮೈಸೂರು ಗಂಜೀಫಾ ಕಲೆ 'ದೇವರ ಆಟ' ರೂಪದಲ್ಲಿ ಸ್ವತಂತ್ರವಾಗಿ ಬೆಳೆದುದಕ್ಕೆ ಮುಮ್ಮಡಿಯವರೇ ಮುಖ್ಯ ಕಾರಣ. ಇಲ್ಲಿ ಮುಘಲ್ ಪ್ರಭಾವ ಕಡಿಮೆಯಾಗಿ ಮತ್ತೆ ಹಿಂದು ಹಿನ್ನೆಲೆಯೇ ಒಡಮೂಡಿತು. ಮುಮ್ಮಡಿಯವರು ರಚಿಸಿದ ಮತ್ತು ಅವರ ಕಾಲಕ್ಕೆ ಬರೆದ ಗ್ರಂಥಗಳು, ಅವುಗಳ ಚಿತ್ರಗಳನ್ನು ಗಮನಿಸಿದಾಗ ವಿಶಿಷ್ಟವಾದ ಮೈಸೂರು ಶೈಲಿಯೊಂದು ತನ್ನ ವರ್ಣವೈಖರಿಯೊಂದಿಗೆ ಬೆಳೆದುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಮುಮ್ಮುಡಿಯವರ ಒಟ್ಟು ಕಲಾಪ್ರೇಮ, ಭಕ್ತಿ, ಹಿಂದು ಸಂಸ್ಕೃತಿಯ ಶ್ರದ್ಧೆಗಳೇ ಗಂಜೀಫಾ ಕಲೆಯಲ್ಲಿ ಮೇಳೈಸಿದುವು.

ಚಾಮುಂಡೀ ಬೆಟ್ಟವನ್ನು, ದೇವಸ್ಥಾನವನ್ನು ಮಹತ್ವದ ಪುಣ್ಯಕ್ಷೇತ್ರವನ್ನಾಗಿ ಬೆಳೆಸಿದ ಮುಮ್ಮಡಿ.ವರು 'ಶ್ರೀ ಚಾಮುಂಡೇಶ್ವರಿ ತ್ರಿಶತಿ', 'ಚಾಮುಂಡೀ ಮಂಗಲಮಾಲಿಕಾ', 'ಶ್ರೀಚಾಮುಂಡಾಂಬಿಕಾ ಲಘು ನಿಘಂಟು ' ರಚಿಸಿದರು. ಅರಸೊತ್ತಿಗೆ ಹಾಗೂ ಚಾಮುಂಡೀ ಬೆಟ್ಟಕ್ಕೆ ನಿಕಟವಾದ ಬಾಂಧವ್ಯ ಬೆಳೆದದ್ದೇ ಮುಮ್ಮಡಿಯವರ ಕಾಲಕ್ಕೆ. ಅವರಿಗೆ 'ಚಾಮುಂಡಾ ಕೃಪಾಪೂರ್ಣ' ಎಂಬ ಬಿರುದು ದೊರೆಯುವಷ್ಟರ ಮಟ್ಟಿಗೆ ಅವರ ಭಕ್ತಿ -ಶ್ರದ್ಧೆಗಳು ಬೆಳೆದುವು. ಅದುವೆ ಅವರು ಸೃಜಿಸಿದ ಚಾಮುಂಡೇಶ್ವರಿ ಆಟದಲ್ಲೂ

ವ್ಯಕ್ತವಾಯಿತು. ಮುಮ್ಮಡಿಯವರು ಕಡಿಮೆಯೆಂದರೂ, ಹತ್ತು-ಹನ್ನೆರಡು ಆಟಗಳನ್ನು ರೂಪಿಸಿದರು. ಚಾಮುಂಡೇಶ್ವರೀ ಅಲ್ಲದೆ ಪಂಚಪಾಂಡವ, ಜಗನ್ಮೋಹನ, ನವಗ್ರಹ, ನವರತ್ನ, ನವೀನರಾಮ, ಸಾಮ್ರಾಜ್ಯ, ಸದ್ಯೋಜ್ಯಾತ ಅಷ್ಟದಿಕ್ಪಾಲ, ದೇವೀ ದಶಾವತಾರ, ಸರ್ವಮಂಗಳಾ, ಅಷ್ಟೈಶ್ವರ್ಯ, ಮನೋಹರ ಮೊದಲಾದ 'ಪೇಟಕಾ' ಗಳನ್ನು ಸೃಜಿಸಿ, ಆಟವಾಡಿ ಆನಂದಪಟ್ಟರು.

ಹೊಸ ಹೊಸ ಆಟಗಳನ್ನು ಸೃಷ್ಟಿಸುವಾಗ ಅವರು ಕಲಾವಿದರನ್ನು ಕರೆದು ಅವರೊಂದಿಗೆ ಸಮಾಲೋಚಿಸಿರಲೇಬೇಕು. ಗಂಜೀಫಾ ಕಲಾವಿದರನ್ನೂ ಅವರು ಗೌರವಿಸಿದರು. ಈ ಹೊಸ ಆವಿಷ್ಕಾರಗಳು ಕಲಾವಿದರಿಗೆ ನಾತನ ಪ್ರಯೋಗಗಳನ್ನು ಮಾಡಲು ಪ್ರಚೋದನೆ, ಸ್ಫೂರ್ತಿ ಕೊಟ್ಟಿತು. ಮೈಸೂರಿನ ಇತಿಹಾಸದಲ್ಲಿ ಯಾವ ಕಾಲಕ್ಕೂ ಕಲಾವಿದರಿಗೆ ಇಷ್ಟು ಮಹತ್ವ ಪ್ರಾಪ್ತವಾದುದಿಲ್ಲ.

ಮುಮ್ಮಡಿಯವರ ಕಾಲಕ್ಕೆ ಪ್ರಕಟವಾದ ಗ್ರಂಥಗಳನ್ನು ನೋಡಿದರೆ ಅವುಗಳಲ್ಲೆಲ್ಲ ಮೈಸೂರು ಶೈಲಿಯ ಅಪ್ಪಟತನ ಕಾಣುತ್ತದೆ. ಪುಸ್ತಕದ ರೇಖಾಚಿತ್ರಗಳ ವಿನ್ಯಾಸ ಕೂಡ ಗಂಜೀಫಾ ಕಲೆಯನ್ನೇ ಹೋಲುತ್ತದೆ. ಅವರು ಅರಮನೆಯಲ್ಲೇ ಕಲ್ಲಚ್ಚು ಮುದ್ರಣದ ವ್ಯವಸ್ಥೆಯನ್ನೂ ಮಾಡಿದ್ದರು. ಗ್ರಂಥ ರಚನೆ ಮತ್ತು ಕಲಾಪ್ರೇಮ ಒಂದಕ್ಕೊಂದು ಪೂರಕವಾಗಿದ್ದುವು.

'ಶ್ರೀ ತತ್ತ್ವನಿದಿ' ಅವರ ಮೇರು ಕೃತಿ. ಇದರ ಮೂಲ ಹಸ್ತಪ್ರತಿಗಳು ಈಗಲೂ ಮೈಸೂರು ಅರಮನೆ ಹಾಗೂ ಒರಿಯಂಟಲ್ ರೀಸರ್ಚ್ ಸಂಸ್ಥೆಯಲ್ಲಿವೆ. 1823 ರಲ್ಲಿ 1500 ಪುಟಗಳ ಈ ಗ್ರಂಥ ಮುಂಬಯಿಯ ವೆಂಕಟೇಶ್ವರ (ಸ್ಟೀಮ್) ಮುದ್ರಣಾಲಯದಲ್ಲಿ ಕ್ಷೇಮರಾಜ ಕೃಷ್ಣದಾಸರಿಂದ

ಪ್ರಕಟವಾಯಿತು. ಭಾಷೆ ಸಂಸ್ಕೃತ ಲಿಪಿ ಮೋಡಿ ಕನ್ನಡ. ಕನ್ನಡ ಕ್ಯಾಲಿಗ್ರಾಫಿ ಕಲೆಯನ್ನೂ ಮುಮ್ಮಡಿಯವರು ತನ್ಮೂಲಕ ಪ್ರೋತ್ಸಾಹಿಸಿದರು.

'ಶ್ರೀ ತತ್ತ್ವನಿಧಿ' ಯಲ್ಲಿ ಶಕ್ತಿನಿಧಿ, ವಿಷ್ಣುನಿಧಿ, ಶಿವತತ್ತ್ವನಿಧಿ, ಬ್ರಹ್ಮನಿಧಿ, ಗ್ರಹನಿಧಿ, ವೈಷ್ಣವನಿಧಿ, ಆಗಮನಿಧಿ, ಕೌತುಕನಿಧಿ ಮೊದಲಾಗಿ ಒಂಭತ್ತು 'ನಿಧಿ'ಗಳು ಇವೆ. ಇದರಲ್ಲಿ ಧರ್ಮ, ದರ್ಶನ, ಆಗಮ, ಪುರಾಣ, ಕಾವ್ಯ ಜ್ಯೋತಿಷ್ಯ, ಸಂಗೀತ, ನೃತ್ಯ, ಚದುರಂಗ, ಗಂಜೀಫಾ ಮೊದಲಾದ ಒಳಾಂಗಣ ಆಟಗಳ ಸಚಿತ್ರ ವಿವರಗಳಿವೆ. ಇದೊಂದು ಸಮಗ್ರ ವಿಶ್ವಕೋಶ. ಕನ್ನಡದಲ್ಲಿ ಖಂಡಿತವಾಗಿಯೂ ಮೊದಲಿನದು. ಆ ಕಾಲಕ್ಕೆ ಅದ್ಭುತ ಕಾಣಿಕೆ. ಇಂದಿಗೂ ಅಂಥ ಸಚಿತ್ರ ಪುಸ್ತಕ ಇಲ್ಲ.

'ಶ್ರೀತತ್ತ್ವನಿಧಿ'ಯ ಕೌತುಕ ನಿಧಿಯಲ್ಲಿ ಗಂಜೀಫಾ ಕುರಿತು ಚಿತ್ರಗಳ ಸಹಿತ ವಿವರಗಳಿವೆ. ಆಟಗಳ ಹೆಸರುಗಳು, ಗಂಜೀಫಾ ಕಲೆಯ ವಿನ್ಯಾಸ, ಬಣ್ಣ, ರೇಖೆಗಳ ಕುರಿತೂ ಹೇಳಲಾಗಿದೆ. ಇದನ್ನು ಬಿಟ್ಟರೆ ಕನ್ನಡದಲ್ಲಿ ಗಂಜೀಫಾ ಕಲೆ ಮತ್ತು ಆಟದ ಕುರಿತು ಇಷ್ಟು ವಿವರಗಳಿರುವ ಬೇರೆ ಗ್ರಂಥವೇ ಇಲ್ಲ.





## ಎಲ್ಲಿಂದ ಎಲ್ಲಿಗೆ ?

ಗಂಜೀಫಾ ಹುಟ್ಟಿದ್ದು ಎಲ್ಲಿ? ಯಾವ ದೇಶದಲ್ಲಿ ಅದು ಹುಟ್ಟಿ ಎಲ್ಲೆಲ್ಲಿಗೆ ಹೋಯಿತು ? ಹೇಗೆ ಹೋಯಿತು ? ಇದಕ್ಕೆ ಸರಿಯಾದ ಉತ್ತರಗಳು ಇದುವರೆಗೂ ದೊರೆತಿಲ್ಲ. ದಾಖಲೆಗಳೂ ಸಿಕ್ಕಿಲ್ಲ. ಬೇಕಾದಷ್ಟು ಊಹಾಪೋಹಗಳು, ಕಲ್ಪನೆಗಳು ಇವೆ. ಆದರೆ ಪೂರ್ವ ದೇಶಗಳಲ್ಲಿ ಅದು ಹುಟ್ಟಿತು ಎಂಬುದನ್ನು ಈಗ ಹೆಚ್ಚು ಕಡಿಮೆ ಎಲ್ಲ ಇತಿಹಾಸಕಾರರೂ ಒಪ್ಪುತ್ತಾರೆ.

ಒಂದು ಸಾವಿರ ವರ್ಷಗಳ ಹಿಂದೆ ಚೀನದಲ್ಲಿ ಚಿಕ್ಕ ಎಲೆಗಳ ಆಟವಿದ್ದುದಕ್ಕೆ ದಾಖಲೆಗಳಿವೆ. ಗಂಜೀಫಾ ಮೂಲತಃ ಒಂದು ಹಿಂದು ಆಟ. ಚದುರಂಗದಂತೆ ಅದು ಭಾರತದಿಂದಲೇ ಬಂದುದು ಎಂದೂ ಹೇಳುತ್ತಾರೆ. ಬುದ್ಧಿಯನ್ನು ಚುರುಕಾಗಿ ಮಾಡಲು ಈ ಒಳಾಂಗಣ ಆಟಗಳನ್ನು ಆಡುತ್ತಿದ್ದರು. ಅದು ಜಾಣರ ಆಟ ಎಂದು ಕೂಡ ಒಪ್ಪಿದ್ದಾರೆ.

ಪರ್ಶಿಯನ್ ಕವಿ ಅಹ್ಲಿ ಶಿರಾಝಿ 'ರುಬೈಯಾತ್-ಇ-ಗಂಜೀಫಾ' ಎಂಬ ಕವಿತೆಯನ್ನು ಕ್ರಿ.ಶ. 1514 - 15 ರಲ್ಲಿ ಬರೆದಿದ್ದನು. ಅದರಲ್ಲಿ ತಾಜ್ (ಅರಸ), ಗುಲಾಮ (ಸೇವಕ),ಸಮಶೇರ್(ಖಡ್ಗ), ಅಶ್‌ರಫ್ (ಚಿನ್ನದ ನಾಣ್ಯ), ಚಾಂಗ್(ವಾದ್ಯ), ಬಾರಾತ್(ದಾಖಲೆ), ತಂಶಾ(ಬೆಳ್ಳಿನಾಣ್ಯ), ಕಿಮಾಸ್ ಮೊದಲಾದ ಶಬ್ದಗಳಿವೆ.

ಇದಕ್ಕಿಂತಲೂ ಮೊದಲೇ ಭಾರತದಲ್ಲಿ ಗಂಜೀಫಾದಂಥ ಒಂದು ಆಟವಿದ್ದ ದಾಖಲೆಗಳು ಇವೆ. ಪೋರ್ತುಗೀಸರು ಕ್ರಿ.ಶ. 1498ರಲ್ಲಿ ಕಲ್ಲಿಕೋಟೆಗೆ ಬಂದರು. ಸಂತ ಫ್ರಾನ್ಸಿಸ್ ಕ್ಸೇವಿಯರನು ಕ್ರೈಸ್ತಮತ ಪ್ರಚಾರಕ್ಕೆ ಇಲ್ಲಿಗೆ ಬಂದಾಗ ಕ್ರಿ.ಶ 510ರಲ್ಲಿ ತಾನು ನೋಡಿದ ಎಲೆಗಳ ಆಟದ ಕುರಿತು ಬರೆದಿದ್ದಾನೆ.

ಮುಖ್ಯವಾಗಿ ಸಮುದ್ರಯಾನದ ಮೂಲಕ ಈ ಆಟ ಅರೇಬಿಯಾದಿಂದ ಯುರೋಪಿಗೆ ಹೋಗಿರಬೇಕು ಎಂಬುದು ಊಹೆ. ಇಸ್ತಾಂಬುಲ್, ಈಜಿಪ್ತ್, ಸಿರಿಯಾ, ಇರಾಣ, ಸಮರಖಂಡಗಳಲ್ಲಿ ಆಗ ಎಲೆಗಳ ಆಟಗಳಿದ್ದುವು. ಆದರೆ ಭಾರತದ ಕ್ರೀಡಾಪತ್ರಗಳ ವೈಶಿಷ್ಟ್ಯವೆಂದರೆ ಸಂಖ್ಯಾಶಾಸ್ತ್ರದ ಆಧಾರ. ಭಾರತದ ಅಂಕೆ ಸಂಖ್ಯೆಗಳು, ಸೊನ್ನೆ, ಚದುರಂಗ ಎಲ್ಲವೂ 'ರಫ್ತಾಗಿ'ಹೋದಂತೆ ಗಂಜೀಫಾ ಕೂಡ ವಿದೇಶ ಪ್ರವಾಸ ಹೊರಟಿರಬೇಕು.

ಪಣ, ಪಂದ್ಯ, ಜುಗಾರಿ ಆಡುವ, ಬಾಜಿ ಕಟ್ಟುವ ಮನೋಭಾವ ವಿಶ್ವವ್ಯಾಪಿ. ಅದು ಮಾನವನ ದೌರ್ಬಲ್ಯಗಳಲ್ಲಿ ಒಂದು. ಅದರಿಂದ ಸಾಮ್ರಾಜ್ಯಗಳೇ ಉರುಳಿದ್ದಾವೆ. ಎಲೆಗಳಲ್ಲಿ ಸೂರ್ಯ - ಚಂದ್ರ ಸಾಕ್ಷಿಯಾಗಿ, ಚಿನ್ನ ಮತ್ತು ಬೆಳ್ಳಿಯ ಹೆಸರುಗಳನ್ನು ಸೇರಿಸಿ, ಸುರೇಖ್ ಮತ್ತು ಸಫೇದ್‌ಎಂದು ಹೇಳುವ ಆಟಗಳೇ

ಇದ್ದುವು. ಎಲ್ಲವನ್ನೂ ಪಣವಾಗಿಟ್ಟು ಆಡುವ ಪಂದ್ಯದಲ್ಲಿ ಮಾನವನ ಸೃಜನಶೀಲ ಶಕ್ತಿಯೇ ಸವಾಲಿಗೆ ಸವಾಲು ಎಸೆಯುತ್ತದೆ. ಅದೇ ಶಕ್ತಿ ಕಲೆಯ ಸೃಜನಶೀಲತೆಗೂ ಕಾರಣವಾಗುತ್ತದೆ. ಯುದ್ಧದಂಥ ವಿಧ್ವಂಸಕ ಹಿಂಸಾಕ್ರಿಯೆಯ ಜತೆ ಜತೆಯಾಗಿಯೇ ಕಲಾತ್ಮಕ ಸೃಜನಶೀಲತೆಯೂ ಸೇರಿಕೊಂಡಿರುತ್ತದೆ. ಗಂಜೀಫಾ ಆಟಗಳ ಜತೆ ಚಿತ್ರಕಲೆ ಸೇರಿಕೊಂಡದ್ದೂ ಹಾಗೆಯೆ. ಅವು ಒಂದೇ ನಾಣ್ಯದ ಎರಡು ಮುಖಗಳು.

ಗಂಜೀಫಾ ಆಟದ ಹುಟ್ಟು, ಬೆಳವಣಿಗೆಯ ಇತಿಹಾಸವೂ ಕಣ್ಣುಮುಚ್ಚಾಲೆಯ ಒಂದು ಆಟವೇ ಆಗಿದೆ.

•





## ಶೈಲಿ - ವೈವಿಧ್ಯ - ವೈಶಿಷ್ಟ್ಯ

**ಭಾ**ರತದಂಥ ವೈವಿಧ್ಯಪೂರ್ಣ ದೇಶ ಜಗತ್ತಿನಲ್ಲಿಲ್ಲ. ಒಂದೇ ದೇಶದಲ್ಲಿ ಇಷ್ಟು ವಿಭಿನ್ನ ಭಾಷೆಗಳು, ರುಚಿಗಳು, ಕ್ರಮಗಳು ಬೇರೆಲ್ಲೂ ಕಾಣಲಾರದು. ಇದು ನಮ್ಮ ಸಾಹಿತ್ಯ, ಸಂಗೀತ, ಚಿತ್ರಕಲೆ, ಶಿಲ್ಪ ಎಲ್ಲವುಗಳಲ್ಲಿ ಅಭಿವ್ಯಕ್ತವಾದುದೆ. ಗಂಜೀಫಾ ಕಲೆ ಇದಕ್ಕೆ ಹೇಗೆ ಅಪವಾದವಾದೀತು? ಇಷ್ಟೆಲ್ಲ ವೈವಿಧ್ಯವಿದ್ದರೂ ನಮ್ಮ ಸಮಗ್ರ ದೇಶದಲ್ಲಿ ಒಂದು ಏಕಸೂತ್ರತೆ ಇದೆ. ಅಂತಃಸ್ಸತ್ವ ಒಂದೇ ಆಗಿದೆ. ಅದೇ ವೈಶಿಷ್ಯ. 'ಏಕಂ ಸತ್ ವಿಪ್ರಾ ಬಹುಧಾ ವದಂತಿ' ಅಂದರೆ ಇದೇ ಅಭಿವ್ಯಕ್ತಿ.

ಯಾವ ಧರ್ಮದಲ್ಲೂ ದೇಶದಲ್ಲೂ ಇಷ್ಟು ದೇವರುಗಳಿಲ್ಲ. ಆದರೂ ನಾವು ದೇವರು ಒಬ್ಬನೇ ಎಂದೇ ನಂಬಿದ್ದೇವೆ. ದೇವರ ಬೇರೆ ಬೇರೆ ಹೆಸರುಗಳು, ಅವತಾರಗಳು, ರೂಪಗಳು ನಮ್ಮ ಕಲೆಯಲ್ಲಿ ಅಭಿವ್ಯಕ್ತಗೊಂಡಿವೆ. ಈ ಅಭಿವ್ಯಕ್ತಿ ಸ್ವಾತಂತ್ರ್ಯ ಜಗತ್ತಿನ ಯಾವ ದೇಶದಲ್ಲೂ ಇಲ್ಲ. ಹಾಗೆಯೇ ಇಷ್ಟು ವೈವಿಧ್ಯವನ್ನು ಎಲ್ಲೂ

ಕಾಣಲಾರೆವು. ಗಂಜೀಫಾ ಕಲೆಯ ವೈವಿಧ್ಯಕ್ಕೂ ಇದೇ ಕಾರಣ. ಹಲವು ಶೈಲಿಗಳಿಗೂ ಮೂಲ.

ಭಾರತದಲ್ಲಿ ಸುಮಾರು 15 ಕ್ಕೂ ಹೆಚ್ಚು ಬಗೆಯ ಶೈಲಿಗಳ ಗಂಜೀಫಾ ಕಲೆ ಇತ್ತು. ಇಂದು ಅವುಗಳಲ್ಲಿ ಕೆಲವು ಮಾತ್ರ ಉಳಿದಿವೆ. ಸ್ವಾತಂತ್ರ್ಯ ನಂತರ ಗಂಜೀಫಾ ಆಟವೇ ಅಳಿದು ಹೋಯಿತು. ಇಂದು ಹೆಚ್ಚು ಕಡಿಮೆ ಚಿತ್ರಕಲೆಯಾಗಿ, ಕೇವಲ ಪಳೆಯುಳಿಕೆಯಾಗಿ ಮಾತ್ರ ಈ ಕಲೆ ಉಳಿದಿದೆ. ವಿದೇಶೀಯರ ಬೇಡಿಕೆ, ಕಲಾತ್ಮಕ ದೃಷ್ಟಿಯಿಂದ ಕೆಲವರ ಸಂಗ್ರಹದ ಹವ್ಯಾಸದಿಂದಾಗಿ ಈ ಕಲೆ ಉಳಿದಿದೆ. ಆದರೆ ಅತ್ಯಂತ ಸೂಕ್ಷ್ಮವಾದ ರೀತಿಯಲ್ಲಿ ಕೆಲಸ ಮಾಡುವ ಚಿತ್ರಕಾರರು ಮಾತ್ರ ತೀರಾ ತೀರಾ ವಿರಳರಾಗುತ್ತಿದ್ದಾರೆ.

ಪಶ್ಚಿಮ ಬಂಗಾಳದ ಬಾಂಕುರ ಜಿಲ್ಲೆಯ ಬಿಷ್ಣುಪುರ ಗಂಜೀಫಾ ಕಲೆಯ ಒಂದು ಕೇಂದ್ರ. ಮಲ್ಲ ಅರಸರ ಕಾಲದಲ್ಲಿ ಅಲ್ಲಿ ಗಂಜೀಫಾ ಕಲೆಗೆ ಭಾರಿ ಪ್ರೋತ್ಸಾಹ ದೊರೆತಿತ್ತು. ಇಂದು ಕೇವಲ ವಿದೇಶೀಯರ ಅಲ್ಪಸ್ವಲ್ಪ ಬೇಡಿಕೆಯಿಂದ ಈ ಕಲೆ ಬದುಕಿ ಉಳಿದಿದೆ. ಇಲ್ಲಿಯ ಗಂಜೀಫಾಗಳಲ್ಲಿ ಬಂಗಾಳದ ಕೆಂಪು ಬಣ್ಣಕ್ಕೆ, ನಸು ಕೆಂಪಿಗೆ ಹೆಚ್ಚು ಪ್ರಾಧಾನ್ಯ. ಇವರ ಶೈಲಿಯಲ್ಲಿ ಚಿತ್ರಗಳು ಬಂಗಾಳೀ ಮನೋಭಾವಕ್ಕೆ ಅನುಗುಣವಾಗಿಯೇ ಏನೋ ತುಸು ಉಗ್ರವಾಗಿರುತ್ತವೆ. ನುಣುಪು ಬಟ್ಟೆಗೆ ಖ್ಯಾತಿವೆತ್ತ ಮುರ್ಶಿದಾಬಾದ್ ಇನ್ನೊಂದು ಗಂಜೀಫಾ ಕೇಂದ್ರ.

ಒರಿಸ್ಸದ ಗಂಜಂ ಜಿಲ್ಲೆಯ ಚಿತ್ರಕಾರ ಸಹಾ (ರಸ್ತೆ)ಅತ್ಯಂಕ ವಿಶಿಷ್ಟ. ಅಲ್ಲಿಯ ಪರ್ಲಕಿಮುಂಡಿಯಲ್ಲೂ ಸಾಂಪ್ರದಾಯಿಕ ಒಡಿಸ್ಸಿ ಶೈಲಿಯ ಕಲಾಕಾರರಿದ್ದಾರೆ. ಪುರಿ ಜಿಲ್ಲೆಯ ರಘುರಾಜಪುರ ಇನ್ನೊಂದು ಗಂಜೀಫಾ ಕಲಾಕೇಂದ್ರ. ಒಡಿಸ್ಸ ಶೈಲಿಯಲ್ಲಿ ಹಳದಿ

ಬಣ್ಣವೇ ಪ್ರಧಾನ. ಪುರಿಯ ಜಗನ್ನಾಥ ಇಲ್ಲಿಯ ಗಂಜೀಫಾ ಕಲೆಯ ಮೇಲೆ ಮಾಡಿದ ಪ್ರಭಾವ ಅಪ್ರತಿಮ. ಕೃಷ್ಣಲೀಲೆಯ 'ಅಷ್ಟಮಾಲಾ' ಗಂಜೀಫಾಗಳು ಬಲು ಸುಂದರ.

ಆಂಧ್ರದ ನಿರ್ಝಾಮಾಬಾದ್ ಜಿಲ್ಲೆಯ ನಿರ್ಮಲ ಗಂಜೀಫಾಗಳದ್ದೇ ವೈಶಿಷ್ಟ್ಯ. ಇಲ್ಲಿ ಕಲಮ್‌ಕಾರಿಯ ಪ್ರಭಾವ ಗಂಜೀಫಾ ಕಲೆಯ ಮೇಲೆ ಆಗಿದೆ. ಬಂಗನಪಳ್ಳಿ ಮುಖ್ಯ ಕೇಂದ್ರ.

ಕಾಶ್ಮೀರದ ನಿಸರ್ಗದ ಸೊಗಸು, ಹಸಿರು ಹೂ - ಬಳ್ಳಿ ಅಲ್ಲಿಯ ಗಂಜೀಫಾಗಳಲ್ಲಿ ಒಡಮೂಡಿದರೆ, ರಾಜಸ್ಥಾನದ ಗಂಜೀಫಾಗಳು ಅಲ್ಲಿಯ ಉಡುಪು, ಉಸುಕುಗಳ ಪ್ರಭಾವವನ್ನು ವರ್ಣರಂಜಿತವಾಗಿ ತೋರಿಸುತ್ತವೆ. ಈಗ ಮಹಾರಾಷ್ಟ್ರದ ಭಾಗವೇ ಆಗಿರುವ ಸಹ್ಯಾದ್ರಿಯ ತಪ್ಪಲಲ್ಲಿರುವ ಕೊಂಕಣದ ಸಾವಂತವಾಡಿಯ ಶೈಲಿಯೇ ಪ್ರತ್ಯೇಕವಾಗಿದೆ.

ದಕ್ಷಿಣ ಭಾರತಕ್ಕೆ ಬಂದಂತೆ ಗಂಜೀಫಾ ಎಲೆಗಳ ಬಣ್ಣದಲ್ಲಿ ಕಂದುಮಿಶ್ರಿತ ಕಡುವರ್ಣ ಹೆಚ್ಚಾಗುವುದನ್ನು ಕಾಣುತ್ತೇವೆ. ಮೈಸೂರಿನ 'ಚಡ' ಗಳಲ್ಲಿ ಈ ಸ್ನಿಗ್ಧತೆ ಹೆಚ್ಚು. ಉತ್ತರ ಭಾರತದ 'ಕಲಮ್' ಗಳು ಹೆಚ್ಚು ವರ್ಣಮಯ ಹಾಗೂ ಪ್ರಕಾಶದಿಂದ ಕೂಡಿರುವುದಕ್ಕೆ ಇತಿಹಾಸದಲ್ಲಿ ಅಲ್ಲಿ ಆಗಿರುವ ಹೋರಾಟಗಳೇ ಕಾರಣವಾಗಿರಬಹುದು. ದಖ್ಖಣ ಪೀಠಭೂಮಿ, ಕರಿಮಣ್ಣು ಇಲ್ಲಿಯ ಗಂಜೀಫಾಗಳಲ್ಲಿ ಒಡಮೂಡಿದೆ.

ಗಂಜೀಫಾ ಚಿತ್ರಕಲೆ ನಿಸರ್ಗಕ್ಕೆ ಅತ್ಯಂತ ಹತ್ತಿರವಾದುದು. ಅದು ಭಾರತೀಯ ಮೂಲ ಎಂಬುದಕ್ಕೆ ಒಂದು ಮುಖ್ಯ ಕಾರಣ ಜಲವರ್ಣ ಮತ್ತು ರೇಖಾವಿನ್ಯಾಸ. ವನಸ್ಪತಿಗಳಿಂದಲೇ ಬಣ್ಣಗಳನ್ನು

ಸಿದ್ಧಪಡಿಸಿ, ಅತ್ಯಂತ ನೈಸರ್ಗಿಕ ರೀತಿಯಲ್ಲಿ ಅವುಗಳ ಮಿಶ್ರಣ ಮಾಡಿ, ಕಲಾವಿದರು ತಾವೇ ಮಾಡಿದ ಕುಂಚ (ಅಳಿಲು, ಉಡ, ಒಂಟೆಗಳ ಕೂದಲು)ಗಳಿಂದ ಚಿತ್ರ ತಯಾರಿಸುತ್ತಾರೆ. ಅಳಲೆಕಾಯಿ, ದಾಳಿಂಬೆ ಹಣ್ಣಿನ ಸಿಪ್ಪೆ, ಹುಣಸೆಬೀಜ, ಅರಸಿನ, ಶ್ರೀಗಂಧ, ಹೂವುಗಳು, ಎಲೆಗಳು, ತೊಗಟೆಗಳು, ಬೇರುಗಳು ಇವುಗಳಿಂದ ತಯಾರಿಸಿದ ಬಣ್ಣ ಸಾವಿರಾರು ವರ್ಷವಾದರೂ ಕೆಡುವುದಿಲ್ಲ. ದುರದೃಷ್ಟವಶಾತ್ ಈ ಜ್ಞಾನವೂ ಅಳಿದು ಹೋಗುತ್ತಿದೆ. ಇದನ್ನು ಉಳಿಸುವ ಪರಂಪರೆಯೇ ನಾಶವಾಗುತ್ತಿದೆ.

ಮೈಸೂರಿನಲ್ಲಿ ಈ ಬಣ್ಣಗಳ ಮಿಶ್ರಣವನ್ನು ಅಚ್ಚಕನ್ನಡದಲ್ಲಿ ಹೇಳುವ ಕಲಾವಿದರು ಈಗಲೂ ಇದ್ದಾರೆ. ಆದರೆ ಆಧುನಿಕ ಕಲಾಶಿಕ್ಷಣದಲ್ಲಿ ಸಾಂಪ್ರದಾಯಿಕವಾದ, ಶಾಸ್ತ್ರಬದ್ಧವಾದ ಈ ತಂತ್ರಗಳನ್ನು ಹೇಳಿಕೊಡುವುದಿಲ್ಲ. ರೆಡಿಮೇಡ್ ಬಣ್ಣಗಳು ಸುಲಭವಾಗಿ ಸಿಗುವುದರಿಂದ, ಕುಂಚಗಳೂ ಸಿದ್ಧವಾಗಿ ಅಂಗಡಿಗಳಲ್ಲಿ ಲಭ್ಯವಾಗಿರುವುದರಿಂದ ತರುಣ ಪೀಳಿಗೆಯ ಕಲಾವಿದರು ಈ ಶಾಸ್ತ್ರದಿಂದ ವಂಚಿತರಾಗಿದ್ದಾರೆ. ಇದರಿಂದ ನಮ್ಮ ದೇಶೀ ಪದ್ಧತಿಯೇ ಅಳಿಸಿ ಹೋಗುತ್ತಿದೆ.

'ಶ್ರೀ ತತ್ತ್ವನಿಧಿ'ಯಲ್ಲಿ ಹೇಳಿದಂಥ ಬಣ್ಣಗಳ ಹೆಸರುಗಳನ್ನು ಕೇಳಿ - ಚಿಂನದ ಬಂಣ, ಯಿಂಗಲೀಕದ ಬಂಣ, ಜಂಗಾಲು ಬಂಣ, ಪಿಸ್ತಾ ಬಂಣ, ಸಂಪಿಗೆ ಬಂಣ, ಚಂದ್ರ ಬಂಣ, ಗುಲಡಾ ಬಂಣ, ಕಪ್ಪು ಪಚ್ಚೆ ಬಂಣ, ನೀಲ ಬಂಣ, ವರ್ತೀ ಬಂಣ, ಊದಾ ಬಂಣ- ಇವು ನಿಸರ್ಗಕ್ಕೆ ಬಲು ನಿಕಟ.

ಗಂಜೀಫಾ ಕಲೆಯಲ್ಲಿ ವೈವಿಧ್ಯಕ್ಕೆ ಎಣೆಯಿಲ್ಲ. ಪ್ರಾದೇಶಿಕ ಶೈಲಿಗಳಲ್ಲದೆ ಆಯಾ ಅರಸರು, ಅವರ ಮಂತ್ರಿಗಳು, ಝುನಾನಾ

(ಅಂತಃಪುರ) ದ ಸ್ತ್ರೀಯರು, ಜಾಗೀರದಾರರು ತಮ್ಮ ತಮ್ಮ ಅಭಿರುಚಿಯಂತೆ ಚಿತ್ರಗಳನ್ನು ಮಾಡಿಸಿಕೊಳ್ಳುತ್ತಿದ್ದರು. ದೇವತೆಗಳು, ದೈವಿಕ ಸಂಕೇತಗಳಿಂದ ಹಿಡಿದು, ಕಾಮಕಲೆಯ ಮಿಥುನಗಳು, ತಾಂತ್ರಿಕ ಎಲೆಗಳು, ಗಂಜೀಫಾ ಆಟವಾಡುವಾಗ ನುಡಿಸುವ ವಾದ್ಯ (ಚಾಂಗ್ - ಯಾರ್ಘ್ ಎಂಬ ವೀಣೆ) ವಿನ್ಯಾಸಗಳನ್ನು, ಚಿತ್ರಗಳನ್ನು ಅಳವಡಿಸಿಕೊಂಡದ್ದು ಕಂಡು ಬರುತ್ತದೆ.

ಅರಸರು ಆಡುವ ' ದರಬಾರ್ ಕಲಂ' ಗಳಲ್ಲಿ ಕಿರೀಟ, ಕತ್ತಿ, ಸಿಂಹ, ಛತ್ರಿ ಕುದುರೆಗಳಿದ್ದರೆ ' ಬಾರ್ಘೂರ್ ಕಲಂ' ಗಳಲ್ಲಿ ಮೀನು, ಆಮೆ, ಶಂಖ, ಹಂದಿ, ಕಮಲ, ಬೀಸಣಿಗೆಯ ಸಂಕೇತಗಳು ಸಾಮಾನ್ಯವಾಗಿರುತ್ತಿದ್ದುವು. ಮೈಸೂರಿನಲ್ಲಿ 'ಮೋಹಿನಿ' ಪೆಟ್ಟಿಗೆ ಎಂಬುದಿತ್ತು. ಬಹುಶಃ ಅದನ್ನು ಅಂತಃಪುರದಲ್ಲಿ ಆಡಲಿಕ್ಕಾಗಿಯೇ ಸೃಜಿಸಿರಬೇಕು. ಆಯಾ ಪ್ರದೇಶದ ಹೂ, ಹಣ್ಣು, ಪಕ್ಷಿ, ಬಣ್ಣಗಳು ಅಲ್ಲಲ್ಲಿಯ ಎಲೆಗಳಲ್ಲಿ ಕಾಣುತ್ತಿದ್ದುವು. ಎಷ್ಟು ಪ್ರದೇಶಗಳಿದ್ದವೋ ಅಷ್ಟೇ ಬಗೆಯ ಕಲಾವಿನ್ಯಾಸದ ಶೈಲಿಗಳಿದ್ದುವು.

'ಐನ್ - ಈ - ಅಕ್ಬರಿ' ಯಲ್ಲಿ ಅಬುಲ್‌ಫಜಲ್‌ನು 'ಈ ಆಟ ಹಿಂದಿನ ಋಷಿ - ಮುನಿಗಳಿಂದ ಬಂತು' ಎಂದು ಒಂದು ಕಡೆ ಬರೆದಿದ್ದಾನೆ. ಆದರೆ ಅಕ್ಬರನ ಆಸ್ಥಾನಕ್ಕೆ ಬರುವಾಗ ಅಶ್ವಪತಿ, ಗಜಪತಿ, ನರಪತಿ , ಗಡಪತಿ (ಕೋಟೆ), ಧನಪತಿ, ದಳಪತಿ, ನವಪತಿ, ತಿಪಾತಿ (ಸ್ತ್ರೀ ನಾಯಕ), ಸುರಪತಿ, ಅಸುರಪತಿ, ವನಪತಿ, ಅಹಿಪತಿ (ಸರ್ಪ) ಹೀಗೆ ಚಿತ್ರಣಗಳಲ್ಲಿ ರಾಜಮುದ್ರೆಯ ಲಾಂಛನಗಳು ಅಚ್ಚೊತ್ತಿದ್ದುವು. ಗಂಜೀಫಾದ ಪರಿಭಾಷೆ ಬದಲಾಯಿತು. ದರ್ಬಾರದ ಕಟ್ಟುನಿಟ್ಟು, ಆಚಾರ - ವಿಚಾರಗಳೆಲ್ಲ ಈ ಆಟದಲ್ಲಿ ಮತ್ತು ಕಲೆಯಲ್ಲಿ ಒಡಮೂಡಿದುವು.

ಪರ್ಶಿಯಾದಿಂದ 'ನಕ್ಷ್' ಕುಸುರಿ ಕೆಲಸ ಚಿಕಣಿ ಚಿತ್ರಗಳ ಮೂಲಕ ಭಾರತಕ್ಕೆ ಬಂದರೂ ಅದು ಇಲ್ಲಿ ಪ್ರಾದೇಶಿಕ ವೈಲಕ್ಷಣ, ವಿನ್ಯಾಸ, ಪ್ರಭಾವಗಳಿಂದ ಆಯಾ ಪ್ರದೇಶಗಳಲ್ಲಿ ಭಿನ್ನ ಭಿನ್ನ ರೀತಿಯಲ್ಲಿ ಅಭಿವ್ಯಕ್ತಗೊಂಡಿತು.

•





## ದೇಶ - ವಿದೇಶಗಳಲ್ಲಿ
## ಮೈಕ್ರೊ - ಮಿನಿಯೇಚರ್ ಕಲೆ

ಗಂಜೀಫಾ ಕಲೆಯನ್ನು ಕಲಾರಸಿಕರು ಮೆಚ್ಚಿಕೊಳ್ಳುವುದೇ ಅದರ ಸೂಕ್ಷ್ಮ - ಕುಸುರಿ ಕೆಲಸಕ್ಕಾಗಿ ಮತ್ತು ಚಿಕಣಿ ಆಕಾರಕ್ಕಾಗಿ. ಅದುವೆ ಅದರ ವೈಶಿಷ್ಟ್ಯ. ಅದುವೆ ಅದರ ಸೌಂದರ್ಯ.

ಸುಮಾರು ಏಳು ಸೆಂಟಿಮೀಟರ್ ವ್ಯಾಸ (ಅಡ್ಡ ಅಳತೆ) - (ಎರಡು ಮುಕ್ಕಾಲು ಇಂಚು) ಮತ್ತು ಎರಡರಿಂದ ಮೂರು ಮಿಲಿಮೀಟರ್ ದಪ್ಪದ ಗಂಜೀಫಾವನ್ನು ಈಗ ಹೆಚ್ಚಾಗಿ ತೆಳ್ಳಗೆ ರಟ್ಟಿನಿಂದ ಅಥವಾ ಹಲವು ಕಾಗದದ ಪದರುಗಳಿಂದ ವೃತ್ತಾಕಾರದಲ್ಲಿ ತಯಾರಿಸುತ್ತಾರೆ. ಮೂಲತಃ ಇದ್ದುದೇ ವೃತ್ತಾಕಾರ. ಅನಂತರ ಆಯತ ಮತ್ತು ಅಂಡಾಕಾರಗಳು ಬಂದುವು. ಗಂಜೀಫಾ ಆಟದಲ್ಲಿ 16 ರಿಂದ 900ಎಲೆಗಳ ಸಂಪುಟ ಅಥವಾ ಪೆಟ್ಟಿಗೆ ಇರುತ್ತದೆ. ಪ್ರತಿಯೊಂದರಲ್ಲೂ ಪ್ರತ್ಯೇಕ ಚಿತ್ರಗಳನ್ನು ರಚಿಸುತ್ತಾರೆ. ಮೈಸೂರಿನಲ್ಲಿ ಇವನ್ನು 'ಚಡ'ಎನ್ನುತ್ತಾರೆ.

ಅತ್ಯಂತ ದುರಂತದ ವಿಚಾರವೆಂದರೆ ಭಾರತದಲ್ಲಿದ್ದ ಹಳೆಯ (ಆಟ ಆಡಿ ಆಡಿ ಉಪಯೋಗಿಸಿದ) ಎಲೆಗಳಲ್ಲಿ ಹೆಚ್ಚಿನವು ವಿದೇಶೀ ಮ್ಯೂಸಿಯಂನಲ್ಲಿವೆ, ಅಥವಾ ಖಾಸಗೀ ಸಂಗ್ರಹದಲ್ಲಿವೆ. ಮುಖ್ಯಾವಾಗಿ ಜರ್ಮನಿಯವರು, ಇಟಾಲಿಯನರು, ಫ್ರೆಂಚರು, ಅಮೆರಿಕನರಿಗೆ ಗಂಜೀಫಾಗಳು ತುಂಬ ಇಷ್ಟ. ಬ್ರಿಟಿಷರಲ್ಲೂ ಅನೇಕ ಖಾಸಗಿ ಸಂಗ್ರಾಹಕರಿದ್ದಾರೆ. ಇಂಗ್ಲೆಂಡ್‌ನಲ್ಲಿರುವ ಹಲವು ಮ್ಯೂಸಿಯಂಗಳಲ್ಲಿ ಗಂಜೀಫಾಗಳನ್ನು ಆದರದಿಂದ ಸಂಗ್ರಹಿಸಿ ಇಟ್ಟಿದ್ದಾರೆ. ಅದರ ಬಗ್ಗೆ ಅಧ್ಯಯನ, ಸಂಶೋಧನೆ ನಡೆದು ಗೋಷ್ಠಿಗಳು, ಉಪನ್ಯಾಸಗಳು ಆಗುತ್ತವೆ. ಪುಸ್ತಕ, ಚಿತ್ರ, ವರ್ಣ ಪಾರದರ್ಶಿಕೆಗಳನ್ನು ಪ್ರಕಟಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಭಾರತದ ಯಾವುದೇ ಮ್ಯೂಸಿಯಂನಲ್ಲಾಗಲಿ ಕಲಾಶಾಲೆಯಲ್ಲಾಗಲಿ ಈ ರೀತಿ ಗಂಜೀಫಾ ಕಲೆಯನ್ನು ಗೌರವಿಸುವುದನ್ನು ನಾನು ಕಂಡಿಲ್ಲ. ಬ್ರಿಟಿಷರ ಕಾಲದಲ್ಲಿ ಆಗಿದ್ದ ಸಂಗ್ರಹ ಬಿಟ್ಟರೆ ಹೊಸ ಸಂಗ್ರಹ ಆದದ್ದೇ ಇಲ್ಲ. ಬ್ರಿಟಿಷರ ಕಾಲದ ಸಂಗ್ರಹವನ್ನೂ ಸರಿಯಾಗಿ, ಜನರು ಕಾಣುವ ರೀತಿಯಲ್ಲಿ ನಮ್ಮ ಮ್ಯೂಸಿಯಂಗಳಲ್ಲಿ ಆಕರ್ಷಕವಾಗಿ ಪ್ರದರ್ಶಿಸಿಲ್ಲ.

ಇದಕ್ಕೆ ಒಂದೇ ಒಂದು ಅಪವಾದ ಧರ್ಮಸ್ಥಳದ ಹೆಗ್ಗಡೆಯವರು ಆರಂಭಿಸಿದ 'ಮಂಜೂಷಾ' ಮ್ಯೂಸಿಯಂ. ಈ ಹಿಂದೆಯೇ ಅಲ್ಲಿ ಕೆಲವು ಗಂಜೀಫಾ ಸಂಗ್ರಹವಿತ್ತು. ಕಲಾವಿದ ಪಿ.ಆರ್. ತಿಪ್ಪೇಸ್ವಾಮಿಯವರು ಈ ಮ್ಯೂಸಿಯಂನ್ನು ಕ್ರಮಪ್ರಕಾರವಾಗಿ ಜೋಡಿಸಿಡುವಾಗ ಗಂಜೀಫಾಗಳಿಗೆ ಪ್ರತ್ಯೇಕ ವಿಭಾಗ ಮಾಡಿದ್ದಾರೆ. ಕಲೆಯ ಸೌಂದರ್ಯವನ್ನು ಜನರು ಹೆಚ್ಚು ಹೆಚ್ಚು ಅನುಭವಿಸಿದಂತೆ ಅದರ ಮೌಲ್ಯವೂ ವರ್ಧಿಸುತ್ತದೆ.

ಗಂಜೀಫಾ ಕಲೆಯ ವೈಶಿಷ್ಟ್ಯವೆಂದರೆ ಭಾರತೀಯ ಕಲೆಯ ವಿಶೇಷವೇ ಆದ ಅದರ ಜೀವಂತ ರೇಖೆಗಳು. ಕಲಾವಿದರು ಶಾಸ್ತ್ರೀಯ ರೀತಿಯಲ್ಲಿ ದೇವದೇವತೆಗಳ ಅಂಗಾಂಗ ಸೌಷ್ಟವಗಳನ್ನು ಪ್ರಮಾಣಬದ್ಧವಾಗಿ ರಚಿಸುವುದು ಅತ್ಯಂತ ಮುಖ್ಯ. ಕೆಲವು ಹಳೆಯ ಕಲಾವಿದರಿಗೆ ದೇವದೇವತೆಗಳ ಧ್ಯಾನ ಶ್ಲೋಕಗಳು ಬಾಯಿಪಾಠ ಬರುತ್ತವೆ. ಈ ಕಲಾವಿದರಲ್ಲಿ ಹಿಂದುಗಳು ಹಾಗೂ ಮುಸ್ಲಿಮರೂ ಇದ್ದಾರೆ. ಹಿಂದು ಕಲಾವಿದರುಗಳಲ್ಲಿ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಎಲ್ಲರೂ ಇದ್ದಾರೆ. ಪರಂಪರಾಗತವಾಗಿ ಮಾತ್ರವಲ್ಲ, ಆಸಕ್ತಿಯಿಂದ ಈ ಕಲೆಯನ್ನು ಕರಗತ ಮಾಡಿಕೊಂಡವರಿದ್ದಾರೆ.

ಗಂಜೀಫಾ ರಚನೆಯಲ್ಲಿರುವುದೆಲ್ಲವೂ ಕುಂಚದ ಕೆಲಸ. ಈ ಕುಂಚಗಳನ್ನು ಕಲಾವಿದರೇ ಅಳಿಲಿನ ಬಾಲ, ಒಂಟೆ ಮತ್ತು ಉಡದ ರೋಮಗಳಿಂದ ನಿರ್ಮಿಸಿಕೊಳ್ಳುತ್ತಾರೆ. ಮುಳ್ಳು ಹಂದಿಯ ಮುಳ್ಳನ್ನೂ ಕೆಲವೊಮ್ಮೆ ಉಪಯೋಗಿಸುವುದುಂಟು.

ಚಿತ್ರಕಲೆಯ ಕೆಲಸ ಸಾಕ್ಷಾತ್ ಅತಿಸೂಕ್ಷ್ಮ. ಚಿತ್ರದೊಳಗಿನ ಎಲ್ಲ ಕೂಲಂಕಷ ಅನುವರ್ಣನೆ (Detail) ನೋಡಲು ಭೂತಕನ್ನಡಿಯನ್ನೇ ಹಿಡಿದು ನೋಡಬೇಕು. ಈ ಚಿತ್ರದ ಕೊನೆಯಲ್ಲಿ ಕಲಾವಿದನು ಕೆಲವೊಮ್ಮೆ ತನ್ನ ಹೆಸರನ್ನು ಸಾಸಿವೆ ಕಾಳಿನಷ್ಟು ಸಣ್ಣ ಅಕ್ಷರಗಳಲ್ಲಿ ಬರಿಯುತ್ತಾನೆ.

ಗಂಜೀಫಾದ ಚಿತ್ರರಚನೆ ಆದ ಬಳಿಕ ಅದಕ್ಕೆ ಮೆರಗೆಣ್ಣೆ (ಗಟ್ಟಿ ಎಣ್ಣೆ - VARNISH) ಬಳಿದು ಲಕಲಕ ಹೊಳೆಯುವಂತೆ ಮಾಡುತ್ತಾರೆ. ಇದು ಗಂಜೀಫಾದ ರಕ್ಷಣೆಗೆ ಮಾತ್ರವಲ್ಲ, ಆಟ ಆಡುವವರಿಗೆ ಅದು ಸರಿಯಾಗಿ ಜಾರಬೇಕಲ್ಲ !ಆಂಧ್ರದಲ್ಲಿ

ಗಂಜೀಫಾಗೆ ಹೀಗೆ 'ತಗರಂ'ಎಂಬ ಹೊಳಪು ಕೊಡುವ ಕ್ರಮವಿದೆ. ಅದರಿಂದ ಚಿನ್ನದ ಲೇಪ ಕೊಟ್ಟಂತೆ ಮಿರಿಮಿರಿ ಮಿನುಗುತ್ತದೆ.

ಗಂಜೀಫಾ ಆಟದ ಎಲೆ ಭಾರತದಿಂದ ಅರೇಬಿಯಾ ಮೂಲಕ ಯುರೋಪಿಗೆ ಹೋಗಿ, ಫ್ರಾನ್ಸ್ ದೇಶದಲ್ಲಿ ಇಸ್ಪೀಟು ಆಟವಾಗಿ ಸಂಪೂರ್ಣ ವಿದೇಶಿಯಾದುದು ಎಂಬುದು ಒಂದು ಬಲವಾದ ಊಹೆ. ಆದರೆ ಭಾರತೀಯ ಆಟದಲ್ಲಿ ತುರುಪು (TRUMP)ಇರಲಿಲ್ಲ. ಅದು ಯುರೋಪಿನ ಕಾಣಿಕೆ ಎನ್ನುತ್ತಾರೆ.

ಇನ್ನೊಂದು ಅಭಿಪ್ರಾಯದಂತೆ ಇಸ್ಪೀಟು ಎಲೆಗಳನ್ನು ಕಂಡು ಹಿಡಿದವನು ಪರ್ಸಿಯಾದ ಮಿರ್ ಗಿಯಾತ್ ಅದೌ-ದಿನ್ ಮನ್ಸೂರ್ ಶಿರಾಜಿ ಎನ್ನುವವರಿದ್ದಾರೆ. ಇದಕ್ಕೆ ಸರಿಯಾದ ದಾಖಲೆಗಳಿಲ್ಲ.

ಗಂಜೀಫಾ ಪೆಟ್ಟಿಗೆಗಳನ್ನು ಶುಭಾಶಯಗಳೊಂದಿಗೆ ಮಿತ್ರರಿಗೆ, ಸಂಬಂಧಿಕರಿಗೆ ಕಳಿಸುವ ಒಂದು ಪರಿಪಾಠವಿತ್ತು. ಬಾಬರನ ಮಗಳು ಗುಲ್‌ಬದನ್ ಈ ಬಗೆಯ ಉಡುಗೊರೆಗಳನ್ನು ಕಳಿಸಿಕೊಟ್ಟ ದಾಖಲೆಗಳಿವೆ. ಗಂಜೀಫಾಗಳು ಹೀಗೆ ದೇಶ - ವಿದೇಶಗಳ ನಡುವೆ ಸಾಂಸ್ಕೃತಿಕ ರಾಯಭಾರಿತನದ ಕೆಲಸವನ್ನು ನೆರವೇರಿಸಿದುದುಂಟು.

ಒಂದು ಕಾಲದಲ್ಲಿ ಗಂಜೀಫಾ ಎಲೆಗಳನ್ನು ಚಿನ್ನದ ನಾಣ್ಯದ ಹೆಸರಿನಿಂದಲೆ ಕರೆಯುವ ಕ್ರಮವೂ ಇತ್ತು. ಸಿರಿಯಾ, ಈಜಿಪ್ತ್, ಇಟಲಿಗಳಲ್ಲಿ ಇವನ್ನು ಮಾಮುಲುಕ್ (ಸುಲ್ತಾನ್, ಅಮೀರ), ದೀನಾರಿ, ಅಶ್ರಫ್ ಮೊದಲಾದ ಹೆಸರುಗಳಿಂದ ಕರೆದುದುಂಟು. ಕಾಗದದ ನಾಣ್ಯಗಳು ಬಂದ ಸಂದರ್ಭದಲ್ಲಿ ಗಂಜೀಫಾಗಳಂಥ ಎಲೆಗಳನ್ನೇ ಉಪಯೋಗಿಸಿದ ಸನ್ನಿವೇಶಗಳು ನಡೆದಿವೆ(ಕ್ರಿ.ಶ. 1294ರಲ್ಲಿ ಇರಾಣದ ತಬ್ರೇಝ್‌ನಲ್ಲಿ ಚೀನಿಯರು ವಸಾಹತು ಮಾಡಲು ಪ್ರಯತ್ನಿಸಿದಾಗ ಕಾಗದದ ನಾಣ್ಯಗಳನ್ನು ಮಾಡಿದ್ದರು)

ಅರಸೊತ್ತಿಗೆ, ಅಧಿಕಾರ, ವಿಲಾಸೀ ಜೀವನ, ಹಣದೊಂದಿಗೆ ಗಂಜೀಫಾ ಆಟದ ನಿಕಟ ಸಂಬಂಧ ಇತಿಹಾಸದುದ್ದಕ್ಕೂ ನಡೆದು ಬಂದಿದೆ. ಇಸ್ತಾಂಬುಲ್‌ದ ಟಾಪ್‌ಕಾಪಿ ಸರ್ರೆ ಮ್ಯೂಸಿಯಂನಲ್ಲಿಟ್ಟಿರುವಂಥ ಗಂಜೀಫಾಗಳನ್ನು ಯುರೋಪಿಯನರು ಕಂಡ ಬಳಿಕವೇ (ಸುಮಾರು ಕ್ರಿ.ಶ. 1500 ) ಈ 'ಹಿಂದು ಗೇಂ' ಬಗ್ಗೆ ಪಾಶ್ಚಾತ್ಯರಿಗೂ ವಿಶೇಷ ಆಸಕ್ತಿ ಉಂಟಾಯಿತು. ಇಂದಿಗೂ ಈ ಕಲೆಯ ಕುರಿತು ಪಾಶ್ಚಾತ್ಯರಿಗಿರುವ ಆಸಕ್ತಿ ಭಾರತೀಯರಿಗಿಲ್ಲ ಎಂಬುದು ವಾಸ್ತವಿಕ.





## ಗಂಜೀಫಾ ರಘುಪತಿ ಭಟ್

**ಕ**ರ್ನಾಟಕದಲ್ಲಿ ಗಂಜೀಫಾ ಕಲೆ ಸತ್ತು ಹೋಗಿತ್ತು. ಒಬ್ಬನೇ ಒಬ್ಬ ಕಲಾವಿದನೂ ಇರಲಿಲ್ಲ. ಹಳೆಯ ಮೈಸೂರು ಕಡೆಗಳಲ್ಲಿ ಇದ್ದಂಥ ಗಂಜೀಫಾಗಳನ್ನು ನಮ್ಮವರು ವಿದೇಶೀಯರಿಗೆ ಮಾರುತ್ತಿದ್ದರು. ಅಮೂಲ್ಯವಾದ ನಮ್ಮ ಕಲಾನಿಧಿಯನ್ನು ನಾವೇ ಹೀಗೆ ಮಾರಿಕೊಂಡು ಬಿಟ್ಟದ್ದು ಅದರ ಬಗ್ಗೆ ನಮಗಿರುವ ಪ್ರೀತಿ - ಆದರಗಳು ಎಷ್ಟು ಎಂದು ಹೇಳುತ್ತದೆ . ಗಂಜೀಫಾ ಕಲೆಯಲ್ಲಿ ಒಂದು ನಿರ್ವಾತ ವಾತಾವರಣ ಉಂಟಾಗಿತ್ತು. ಆಟ ಆಡುವವರೂ ಇಲ್ಲವಾದುದರಿಂದ ಕಲಾವಿದರೂ ಮಾಯವಾದರು. ಕಲೆ ಮೂಲೆಗುಂಪಾಗಿತ್ತು. 'ಗಂಜೀಫಾ' ಎಂದರೆ ಏನು? ಎನ್ನುವಷ್ಟರ ಮಟ್ಟಿಗೆ ಪರಿಸ್ಥಿತಿ ಉಂಟಾಗಿತ್ತು.

ಇಂಥ ಹಿನ್ನೆಲೆಯಲ್ಲಿ ದೈವಾನುಗ್ರಹದ ಪ್ರತಿಭೆ ಮತ್ತು ಸ್ವಂತ ಪರಿಶ್ರಮದಿಂದ, ಕೇವಲ ಹಳೆಯ ಗಂಜೀಫಾಗಳನ್ನು ನೋಡಿ,

ಅನುಭವಿಸಿ ಈ ಕಲೆಯನ್ನು ಕರಗತ ಮಾಡಿಕೊಂಡವರು ರಘುಪತಿ ಭಟ್ಟರು. ಈಗ ಅವರು ಗಂಜೀಫಾ ರಘುಪತಿ ಭಟ್ಟರೆಂದೇ ಖ್ಯಾತರು. ಅವರು ಹುಟ್ಟಿದ್ದು 1957ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ಬೆಳ್ಮಣ್ಣು. ಇವರ ತಂದೆ ಉಡುಪಿ ಅಡುಗೆಯವರು - ಅನಂತರಾಮ ಭಟ್. ತಾಯಿ ಕೃಷ್ಣವೇಣಿ. ನಾಲ್ಕು ಗಂಡು, ಮೂರು ಹೆಣ್ಣು ಮಕ್ಕಳಲ್ಲಿ ರಘುಪತಿ ಆರನೆಯವರು. ರಘುಪತಿ ಭಟ್ಟರು ಬೆಳೆದುದು ಮಂಡ್ಯದ ನಾಗಮಂಗಲದಲ್ಲಿ. ಅಲ್ಲಿಯ ಸೌಮ್ಯಕೇಶವ ದೇವಸ್ಥಾನ, ಊರಿನ ಕೆರೆ ಇವರಿಗೆ ಸ್ಫೂರ್ತಿ ಕೊಟ್ಟ ಕೇಂದ್ರಗಳು. ಬಹುಶಃ ಅಲ್ಲಿಯ ಪಂಚಲೋಹ ಮೂರ್ತಿಯ ಕೈಕೆಲಸವೂ ಅವರಿಗೆ ಪ್ರಚೋದನೆ ಕೊಟ್ಟಿರಬೇಕು.

ನಾಗಮಂಗಲ ಒಂದು ಕಾಲಕ್ಕೆ ಮೂರ್ತಿಶಿಲ್ಪ - ಪಂಚಲೋಹ, ಎರಕ ಮಾಡಿ ಮಾಡುವ ಪ್ರತಿಮಾ ಶಿಲ್ಪದ ಕೇಂದ್ರ. ಅಲ್ಲಿ ಈ ಕಲಾವಿದರ ಬೀದಿಯೇ ಇದ್ದಿತ್ತು. ಇಂದು ಒಂದೆರಡು ಮನೆಗಳು ಮಾತ್ರ ಉಳಿದಿವೆ.

ರಘುಪತಿ ಭಟ್ಟರು ಶಾಲೆ -ಕಾಲೇಜಿಗೆ ಹೋಗಿ ಕ್ರಮಾಗತವಾಗಿ ಕಲೆ ಕಲಿತವರಲ್ಲ. ನೋಡಿ, ಅನುಭವಿಸಿ ಶ್ರವಣ, ಮನನ, ನಿಧಿಧ್ಯಾಸಗಳಿಂದ ಕಲಿತವರು. ಆರಂಭದಲ್ಲಿ ಗೋಡೆ ಪೋಸ್ಟರು, ಮೈಲಿ ಕಲ್ಲುಗಳನ್ನೂ ಬರೆದರು. ಸೈನ್ ಬೋರ್ಡುಗಳನ್ನೂ ಬರೆದರು. ಆಮೇಲೆ ಮೈಸೂರು ಸಾಂಪ್ರದಾಯಿಕ ಶೈಲಿಯಲ್ಲಿ ಚಿತ್ರಗಳನ್ನು ಬರೆಯಲಾರಂಭಿಸಿದರು. ಕೆಲವು ತಿಂಗಳು ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಂಜುಂಡರಾಯರಲ್ಲೂ ತರಬೇತಿ ಪಡೆದರು. ಮೈಸೂರಿನಲ್ಲಿ ಹಳೆಯ ಗಂಜೀಫಾ ಎಲೆಗಳನ್ನು ಒಮ್ಮೆ ಆಕಸ್ಮಿಕವಾಗಿ ಕಂಡಾಕ್ಷಣ

ಇಂಥವನ್ನು ತಾನೂ ಬರೆಯಬೇಕು ಎಂದು ಸಂಕಲ್ಪ ಮಾಡಿದರು. ಸಾಧನೆ ಆರಂಭಿಸಿದರು. ಆ ಮೇಲೆ ಹಿಂದಿರುಗಿ ನೋಡಲಿಲ್ಲ.

ರಘುಪತಿ ಭಟ್ಟರ ಮಹತ್ವದ ಸಾಧನೆ ಎಂದರೆ ಅವರು ಅಪ್ಪಟ ಸಾಂಪ್ರದಾಯಿಕ ಮೈಸೂರು ಶೈಲಿಯಲ್ಲೇ ಗಂಜೀಫಾ ಚಿತ್ರರಚನೆ ಮಾಡುತ್ತಿರುವುದು. ಅವರು ಈ ಶೈಲಿಯಲ್ಲೇ ತನ್ನತನವನ್ನು ಸಿದ್ಧಿಸಿಕೊಂಡಿದ್ದಾರೆ. ಹೊಸ ಹೊಸ ಪ್ರಯೋಗಗಳನ್ನು ಸತತವಾಗಿ ಮಾಡಿದರೂ ಸಾಂಪ್ರದಾಯಿಕ ಶೈಲಿಯನ್ನು ಕೆಡಿಸಿಕೊಳ್ಳಲಿಲ್ಲ. ವ್ಯಾಪಾರೀ ಮನೋಭಾವ ಬೆಳೆಸಿಕೊಳ್ಳಲಿಲ್ಲ.

ವನಸ್ಪತಿ ಬಣ್ಣಗಳಿಂದಲೇ ಗಂಜೀಫಾ ತಯಾರಿಸುವ ರಘುಪತಿ ಅವಶ್ಯವೆನಿಸಿದಾಗ ಶ್ರೀಗಂಧ, ಹಸ್ತಿದಂತ ಮೊದಲಾದುವನ್ನು ಉಪಯೋಗಿಸಿ ಅದರ ಮೆರುಗನ್ನು ಕೊಡುತ್ತಾರೆ. ಕೆಲವು ಬಾರಿ ಉಬ್ಬು ಚಿತ್ರಗಳನ್ನೂ ತಯಾರಿಸಿ ಹೊಸತನ ತೋರಿಸಿದ್ದುಂಟು.

ಶ್ರೀ ರಾಮ ರಘುಪತಿಯವರ ಇಷ್ಟದೈವ. ಅವರ ಅತ್ಯಂತ ಉತ್ತಮ ಎಲೆಗಳು ರಾಮಾಯಣ ಚಿತ್ರಗಳಿಂದ ಕೂಡಿವೆ. ರಾಮಾಯಣವನ್ನು 28 ರಿಂದ 1008 ಎಲೆಗಳವರೆಗೂ ಅವರು ರಚಿಸಬಲ್ಲರು. ಅವರ ಇತರ ಪ್ರಮುಖ ಗಂಜೀಫಾ ಎಲೆಗಳು - ವಿಶ್ವರೂಪ, ಶ್ರೀರಂಗ, ಗಣಪತಿ, ನವನಾರೀ ಕುಂಜರ, ಸಪ್ತನಾರೀ ತುರಗ, ವಿಶ್ವಾಮಿತ್ರ - ವಸಿಷ್ಠರು ಕಾಮಧೇನುವಿಗಾಗಿ ಹೋರಾಟ ಮಾಡುವುದು , ಬಾಲಕೃಷ್ಣ, ದಶಾವತಾರ, ನವಗ್ರಹ, ಅಷ್ಟದಿಕ್ಪಾಲಕರು, ಕಾಮಸೂತ್ರದ ಮಿಥುನಗಳು ಇತ್ಯಾದಿ. ಈಗ ರಘುಪತಿ ಭಟ್ ಎಂಬುದು ಗಂಜೀಫಾಗೆ ಪರ್ಯಾಯ ಹೆಸರು.

ರೇಖಾ ಚಿತ್ರಗಳ ಅದ್ಭುತ ಸಂಚಾರ, ಆರೋಹ, ಅವರೋಹಗಳ ಸಂಗೀತವನ್ನು ಕಣ್ಣಿಗೆ ಕಟ್ಟುವಂತೆ ರಚಿಸುವುದರಲ್ಲಿ ರಘುಪತಿ ಎತ್ತಿದ ಕೈ. ಅಚ್ಚ ಭಾರತೀಯ ಶೈಲಿಯಲ್ಲಿ ಅವರು ಮಾಡುವ ರೇಖಾಚಿತ್ರಗಳು ಸಮರ್ಥ, ಸುದೃಢ, ಸುಂದರ. ಆ ರೇಖೆಗಳಲ್ಲೇ ಅವರ ಕಲೆಗಾರಿಕೆಯ ಮಹತ್ವವಿದೆ, ಜೀವಂತಿಕೆಯ ಲವಲವಿಕೆಯಿದೆ.

ರಘುಪತಿ ಭಟ್ಟರು ಕಡು ವರ್ಣಗಳನ್ನು ಉಪಯೋಗಿಸುವುದಿಲ್ಲ. ಭಾರತೀಯ ಹಿನ್ನೆಲೆಯಲ್ಲಿ ಅವುಗಳ ಅರ್ಥವನ್ನು ಕಂಡುಕೊಂಡು ಬಳಸುತ್ತಾರೆ. ಅವು ಕಲಾ ರಸಿಕರನ್ನು ಬೇಗನೆ ಮುಟ್ಟುತ್ತವೆ, ತಟ್ಟುತ್ತವೆ. ಎರಡು ಬಾರಿ ವಿದೇಶಗಳ ಆರ್ಟ್‌ಗ್ಯಾಲರಿ ಮತ್ತು ಮ್ಯೂಸಿಯಂಗಳನ್ನು ನೋಡಿ ಬಂದ ಬಳಿಕ ಅವರ ಕಲೆಯಲ್ಲಿ ಹೊಸ ಸಂಚಾರವಾಗಿದೆ. ಆದರೆ ಅವರ ಮೂಲ ಜಾನಪದ ಸತ್ವ, ಭಾರತೀಯ ಹೊಳಹು ಮತ್ತಷ್ಟು ಗಟ್ಟಿಯಾಗಿದೆ. ರಂಗೋಲಿ, ಹಚ್ಚೆ, ಗಿಡ, ಮರ, ಬಳ್ಳಿ, ಮೃಗ, ಪಕ್ಷಿ, ಹಾವು ಇವೆಲ್ಲವುಗಳಲ್ಲಿ 'ರಘುಪತಿ ಕೈವಾಡ' ಈಗ ಸ್ಪಷ್ಟ. ಅದೇ ಅವರ ಕಲಾಸಿದ್ಧಿ.

ಭಾರತೀಯ ಗಂಜೀಫಾ ನಕಾಸೆಯಲ್ಲಿ ಮತ್ತೆ ಕರ್ನಾಟಕದ ಹೆಸರನ್ನು ಮೂಡಿಸಿದ ಕೀರ್ತಿಗೆ ಭಾಜನರಾದ ರಘುಪತಿ, ಹಲವು ಏಕಕಲಾ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆಗಳನ್ನು ದೆಹಲಿ, ಬೆಂಗಳೂರು, ಮೈಸೂರು, ಮಣಿಪಾಲ, ನಂದಳಿಕೆಗಳಲ್ಲಿ ಮಾಡಿದ್ದಾರೆ.

ಗಂಜೀಫಾ ಏಕವ್ಯಕ್ತಿ ವಿದೇಶೀ ಪ್ರದರ್ಶನವನ್ನು ಮೊತ್ತಮೊದಲಾಗಿ ಮಾಡಿದ ಕೀರ್ತಿ ರಘುಪತಿ ಭಟ್ಟರಿಗೆ ಸಲ್ಲುತ್ತದೆ. ಇಂಗ್ಲೆಂಡ್‌ನಲ್ಲಿ 1992 ಮತ್ತು 1994ರಲ್ಲಿ ಅವರು ಎರಡು

ಪ್ರದರ್ಶನ, ಪ್ರಾತ್ಯಕ್ಷಿಕೆಗಳನ್ನು ನಡೆಸಿದರು. ಮೊದಲನೆಯ ಬಾರಿ ಲಂಡನ್ ಭಾರತೀಯ ವಿದ್ಯಾಭವನದಲ್ಲಿ ಅವರ 12 ದಿನಗಳ ಪ್ರದರ್ಶನ ಭಾರಿ ಯಶಸ್ವಿಯಾಗಿ ನಡೆಯಿತು. ಕಲಾವಿದರು, ವಿಮರ್ಶಕರು ಮೆಚ್ಚಿಕೊಂಡರು. 'ಆರ್ಟ್ ಇನ್ ಆ್ಯಕ್ಷನ್' (1994) ದಲ್ಲಿ ಅವರ ಪ್ರದರ್ಶನ, ಪ್ರಾತ್ಯಕ್ಷಿಕೆ ಅಂತಾರಾಷ್ಟ್ರೀಯ ಕಲಾಮೇಳದಲ್ಲಿ ನಡೆಯಿತು. ವಿಕ್ಟೋರಿಯಾ ಮತ್ತು ಆಲ್ಬರ್ಟ್ ಮ್ಯೂಸಿಯಂ, ಲಂಡನ್ ಅವರು ರಘುಪತಿಯ 60 ಎಲೆಗಳ ರಾಮಾಯಣವನ್ನು ಅವರಿಂದ ವಿಶೇಷವಾಗಿ ಮಾಡಿಸಿ ಪ್ರದರ್ಶಿಸಿದರು. ಅವರ ಪ್ರದರ್ಶನ ಹಾಗೂ ಪ್ರಾತ್ಯಕ್ಷಿಕೆಗಳೂ ಅಲ್ಲಿ ನಡೆದುವು.

"ಈ ಕುಸುರಿ ಕೆಲಸ ಅದ್ಭುತ" ಎಂದು ವಿಕ್ಟೋರಿಯಾ ಮತ್ತು ಆಲ್ಬರ್ಟ್ ಮ್ಯೂಸಿಯಂನ ಭಾರತೀಯ ಕಲೆಯ ವಿಭಾಗದ ಕ್ಯುರೇಟರ್ ಡಾ। ಡಿಬೊರಾ ಸ್ವೆಲೊ ವಿವರಿಸುತ್ತ ಹಾಗೆಯೇ ಬರೆದಿದ್ದಾರೆ. ಅಮೆರಿಕದ ವರ್ಜಿನಿಯ ವಿಶ್ವವಿದ್ಯಾಲಯದಲ್ಲಿ ಧಾರ್ಮಿಕ ಅಧ್ಯಯನ ವಿಭಾಗದ ಮುಖ್ಯಸ್ಥರಾಗಿರುವ ಕನ್ನಡಿಗ ಪ್ರೊ। ಕೆ.ವಿ. ಶೇಷಗಿರಿ ರಾವ್ ರಘುಪತಿಯ ಗಂಜೀಫಾಗಳಲ್ಲಿ 'ಆಧ್ಯಾತ್ಮಿಕ ತೇಜಸ್ಸು, ವರ್ಣವೈಖರಿಯ ಓಜಸ್ಸು, ಕಂಡೆ' ಎಂದಿದ್ದಾರೆ. ಲಂಡನ್ ವಿಶ್ವವಿದ್ಯಾಲಯದ ಭಾರತೀಯ ಹಾಗೂ ಆಫ್ರಿಕನ್ ಇತಿಹಾಸ ಕಲೆಗಳ ವಿಭಾಗದ ನಿವೃತ್ತ ಮುಖ್ಯಸ್ಥ ಡಾ। ಜಾನ್ ಮಾರ್ ಅವರು ರಘುಪತಿಯ ಗಂಜೀಫಾಗಳಲ್ಲಿ 'ಪ್ರತಿಮಾಲಕ್ಷಣ, ಧ್ಯಾನಶ್ಲೋಕಗಳ ಜೀವಂತ ಸಾಕ್ಷಿ'ಗಳನ್ನು ಕಂಡೆ ಎಂದಿದ್ದಾರೆ. 'ಇಷ್ಟು ಯಶಸ್ವಿ ಪ್ರದರ್ಶನ ಎಂದೂ ಭವನದಲ್ಲಿ ಆಗಿಲ್ಲ'ಎಂದು ಲಂಡನ್ ಭಾರತೀಯ ವಿದ್ಯಾಭವನದ ನಿರ್ದೇಶಕರಾದ

ಮತ್ತೂರೂ ಕೃಷ್ಣಮೂರ್ತಿ ಬರೆದರು. ಪ್ರದರ್ಶನ ಉದ್ಘಾಟಿಸಿದ ಅಟಲ್ ಬಿಹಾರಿ ವಾಜಪೇಯಿ ಹಾಗೂ ಸಮಾರೋಪಗೊಳಿಸಿದ ಪಂಡಿತ್ ರವಿಶಂಕರ್ ಅವರು ರಘುಪತಿಯ ಕಲೆಯನ್ನು 'ಸಾಂಸ್ಕೃತಿಕ ರಾಯಭಾರಿ'ಎಂದು ಮೆಚ್ಚಿಕೊಂಡರು.

ರಘುಪತಿಯವರ ಗಂಜೀಫಾ ಕಲೆಯನ್ನು ಮೊತ್ತ ಮೊದಲಿಗೆ ಗುರುತಿಸಿದವರು ಧರ್ಮಸ್ಥಳದ ವೀರೇಂದ್ರ ಹೆಗ್ಗಡೆಯವರು. 'ತರಂಗ' ಪತ್ರಿಕೆ ಈ ಕಲೆಯ್ನನ್ನು ಪುನರುಜ್ಜೀವಿತಗೊಳಿಸಲು ಸತತ ಪ್ರೋತ್ಸಾಹ ಕೊಟ್ಟಿತು.

ಆಕ್ಸ್‌ಫರ್ಡ್‌ನ 'ಆರ್ಟ್ ಇನ್ ಆಕ್ಷನ್' (1994) ಪ್ರದರ್ಶನದಲ್ಲಿ ರಘುಪತಿಯವರ ಗಂಜೀಫಾಗಳು ಜಾಗತಿಕ ಗಮನ ಸೆಳೆದುವು. ಈ ಅಂತಾರಾಷ್ಟ್ರೀಯ ಕಲಾಮೇಳದಲ್ಲಿ ಕಲಾವಿದರು ತಮ್ಮ ಕಲೆಯನ್ನು ಸ್ವತಃ ಮಾಡುವ ಬಗೆಯನ್ನು ವಿವರಿಸಬೇಕು, ಮಾಡಿ ತೋರಿಸಬೇಕು. ದುಂಡಗಾದ ಗಂಜೀಫಾ ಎಲೆಗಳ ಈ ವಿಶಿಷ್ಟ ಕಲೆಯನ್ನು ಕಂಡು ಸಾಮಾನ್ಯ ಜನರು, ಕಲಾವಿದರು, ವಿಮರ್ಶಕರು, ಕಾರ್ಯಕರ್ತರು ಮಂತ್ರಮುಗ್ಧರಾದರು. ಭಾರತೀಯ ಕಲೆಯ ಬಗ್ಗೆ ಅವರ ಗೌರವ ಹೆಚ್ಚಿತು. ಕುತೂಹಲವೂ ಹೆಚ್ಚಿತು.

ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಹೆಸರಿನಲ್ಲಿರುವ ವಿಶ್ವಕರ್ಮ ಪ್ರಶಸ್ತಿಯನ್ನು1990ರಲ್ಲಿ ರಘುಪತಿಯವರಿಗೆ ಕೊಡಲಾಯಿತು. ಅವರ ಕನಸು ಆದ 'ಗಂಜೀಫಾ ಆರ್ಟ್‌ಗ್ಯಾಲರಿ'ಶ್ರೀ ರಂಗಪಟ್ಟಣದಲ್ಲಿ, ಶ್ರೀ ರಂಗನ ದೇವಸ್ಥಾನದ ಮುಂಭಾಗದಲಿರುವ ಮುಮ್ಮಡಿ ಕೃಷ್ಣರಾಜ ಒಡೆಯರು ಹುಟ್ಟಿದ ಸ್ಥಳದಲ್ಲಿ ಕಟ್ಟಿರುವ ಸ್ಮಾರಕ ಕಟ್ಟಡದಲ್ಲಿ ರೂಪುಗೊಂಡಿದೆ. ಹಿರಿಯ ಅಧಿಕಾರಿ ಚಿರಂಜೀವ ಸಿಂಘ ಮತ್ತು ಕರ್ನಾಟಕ ಆರ್ಕಿಯಾಲಜಿ ವಿಭಾಗದ

ನಿರ್ದೇಶಕ ಡಾ||ದೇವರಾಜ್ ಇದಕ್ಕೆ ತುಂಬ ಸಹಾಯ ಮಾಡಿದ್ದಾರೆ. ಲಲಿತ ಕಲಾ ಅಕಾಡೆಮಿಯೂ ಪಿ.ಆರ್. ತಿಪ್ಪೇಸ್ವಾಮಿಯವರ ನೇತೃತ್ವದಲ್ಲಿ ಮಾರ್ಗದರ್ಶನ ಮಾಡಿದೆ. ಉಡುಪಿಯ ಶ್ರೀ ಪುತ್ತಿಗೆ ಮಠಾಧೀಶರಾದ ಶ್ರೀ ಸುಗುಣೇಂದ್ರ ತೀರ್ಥರು ಕಲಾವಿದ ರಘುಪತಿಯ ಬೆಳವಣಿಗೆಗೆ ಪೋಷಣೆ ಕೊಟ್ಟರು. ಶ್ರೀ ರಂಗಪಟ್ಟಣದ ನಗರ ಸಭೆಯವರು ಕೂಡ ಭಾರತದ ಏಕಮಾತ್ರ ಗಂಜೀಫಾ ಕಲಾಶಾಲೆ ತಮ್ಮಲ್ಲಿರಬೇಕು ಎಂಬ ಅಭಿಮಾನದಿಂದ ಅದನ್ನು ನಡೆಸಿಕೊಡಬೇಕು.

1994ರ ರಾಷ್ಟ್ರಪ್ರಶಸ್ತಿಯೂ ಭಾರತ ಸರಕಾರದಿಂದ ರಘುಪತಿ ಭಟ್ಟರಿಗೆ ದೊರೆತಿದೆ. ಇದೆಲ್ಲ ಗಂಜೀಫಾ ಕಲೆಯ ವಿಜಯವೇ ಅಲ್ಲವೆ?





**ಕಲಾನಾಂ ಪ್ರವರಂ ಚಿತ್ರಂ**
**ಧರ್ಮ ಕಾಮಾರ್ಥ ಮೋಕ್ಷದಂ ***

**ಕ**ಲೆಯ ಮೂಲ ಉದ್ದೇಶವೇನು? ಭಾರತೀಯ ತತ್ವಜ್ಞಾನ, ಚಿಂತನ, ದಾರ್ಶನಿಕ ಭಾವಗಳ ಪ್ರಕಾರ ಕೇವಲ ಆನಂದ, ಆನಂದಾನುಭವ. ವಿನೋದ, ಮನೋರಂಜನೆ, ವಿಶ್ರಾಂತಿ ಜನನ(Relaxation)ಇವು ಲೌಕಿಕವಾದ ಅಗತ್ಯಗಳು. ಆಧುನಿಕ ವೈದ್ಯಕೀಯ ವಿಜ್ಞಾನ ಕೂಡ ಉತ್ತಮ ಆರೋಗ್ಯಕ್ಕೆ ಇವು ಅತ್ಯಗತ್ಯ ಎಂದು ಒತ್ತಿ ಹೇಳುತ್ತದೆ.

**ಆನಂದನಿಶ್ಯಂದಿಷು ರೂಪಕೇಷು**
**ವ್ಯುತ್ಪತ್ತಿಮಾತ್ರಂ ಫಲಮಲ್ಪಬುದ್ಧಿಃ**
**ಯೋಽಪೀತಿಹಾಸಾದಿದಾಹ ಸಾಧು :**
**ತಸ್ಮೈ ನಮಃ ಸ್ವಾದುಪರಾಙ್ಮುಖಾಯ ||**

---

* ಚಿತ್ರವು ಕಲೆಗಳಲ್ಲಿ ಶ್ರೇಷ್ಠ. ಧರ್ಮ, ಅರ್ಥ, ಕಾಮ, ಮೋಕ್ಷ ಚತುರ್ವಿಧ · ಪುರುಷಾರ್ಥಗಳನ್ನೂ ಕೊಡಬಲ್ಲುದು.

ವಿಷ್ಣುಧರ್ಮೋತ್ತರ ಪುರಾಣ

(ರೂಪಕ - (ಅಂದರೆ ನಾಟಕ) - ಎಂದರೆ ಆನಂದವನ್ನು ಓತಪ್ರೋತವಾಗಿ ಸೂಸುವ ಪ್ರವಾಹ. ಆದರೆ ಇತಿಹಾಸ (ಪುರಾಣ) ದಂತೆ ಅದು ಜ್ಞಾನ (ವ್ಯುತ್ಪತ್ತಿ) ಮಾತ್ರವನ್ನೇ ಕೊಡುತ್ತದೆ ಎಂದು ನಂಬಿದ ಮಂಕನು ಆಸ್ವಾದವನ್ನೇ ತಪ್ಪಿಸಿಕೊಳ್ಳುತ್ತಾನಲ್ಲ ! ಅವನಿಗೆ(ದೂರದಿಂದಲೇ) ನಮಸ್ಕಾರ)

'ದಶರೂಪಕ'ದ ಧನಂಜಯನ ಈ ಮಾತು ಎಲ್ಲ ಲಲಿತ ಕಲೆಗಳಿಗೂ ಅನ್ವಯಿಸುತ್ತದೆ. ಕಲೆ ಎಂಬುದು ಮನಸ್ಸು, ಬುದ್ಧಿಗಳನ್ನು ಮೀರಿ ಖುಷಿ ಪಡಿಸುವಂಥ ದೈವಿಕ ಸತ್ವ. ಅದನ್ನು ಹಾಗೆ ಅನುಭವಿಸುವವನೇ ಜಾಣ. ಅದಕ್ಕೆ ಭಾವನೆ, ರಸೋತ್ಪತ್ತಿ, ಅಂತರಂಗದ ಕಣ್ಣು, ಅಂತಃಕರಣದ ದೃಷ್ಟಿ ಬೇಕು. ಭಾರತೀಯ ಸಾಂಪ್ರಾದಾಯಿಕ ಕಲೆಗಳಲ್ಲಿ ತಂತ್ರಜ್ಞಾನವೇ ಇಲ್ಲವೆಂದು ಕೆಲವು ಪಾಶ್ಚಾತ್ಯ ವಿಮರ್ಶಕರು ದೂರಿದ್ದರು. ಅದನ್ನೇ ಗುಲಾಮಗಿರಿ ಮನೋಭಾವದಿಂದ ನಂಬಿದ ನಮ್ಮ ಕೆಲವು ಕಲಾ ವಿಮರ್ಶಕರು, ಕಲಾವಿದರು ಸಾಂಪ್ರದಾಯಿಕ ಕಲೆಯಲ್ಲಿ ತಿಳಿಯಬೇಕಾದುದು ಏನೂ ಇಲ್ಲ, ಅದರಲ್ಲಿ ಪ್ರಯೋಗ ಶೀಲತೆಯೇ ಇಲ್ಲ ಎಂಬ ಪೂರ್ವಗ್ರಹ ಬೆಳೆಸಿಕೊಂಡರು. ಗಂಜೀಫಾ ಕಲೆ ಅಥವಾ ನಮ್ಮ ಸಾಂಪ್ರದಾಯಿಕ ಕಲೆ ಭಾರತದಲ್ಲೇ ಅವಜ್ಞೆಗೆ ಒಳಗಾಗಿರುವುದೇ ಈ ದಾಸ್ಯಭಾವಕ್ಕೆ ಮೂಲ ಕಾರಣ.

ಈ ರೀತಿ ನಮ್ಮ ಕಲೆಯನ್ನು ಕಡೆಗಣಿಸುವ ಬುದ್ಧಿಜೀವಿಗಳು ಕ್ರಿ.ಶ. ಮೂರನೆಯ ಶತಮಾನದಲ್ಲಿದ್ದ ವಾತ್ಸಾಯನನ 'ಕಾಮಸೂತ್ರ'ದಲ್ಲಿದ್ದ ಷಡಂಗ ಲಕ್ಷಣಗಳನ್ನು ಖಂಡಿತವಾಗಿ ಓದಿ ತಿಳಿದುಕೊಂಡಿಲ್ಲ. 'ರೂಪಭೇದ, ಪ್ರಮಾಣ, ಭಾವ, ಲಾವಣ್ಯಯೋಜನೆ, ಸಾದೃಶ್ಯ ಮತ್ತು ವರ್ಣಿಕಾಭಂಗ' ಗಳೇ ಕಲೆಗಳ

ಷಡಂಗಗಳು ಎಂದು ವಾತ್ಸಾಯನನು ವರ್ಣಿಸಿದ್ದಾನೆ.

ಭಾರತೀಯ ಕಲೆಗಳ ಒಳನೋಟ ಧಾರ್ಮಿಕ. ದೃಶ್ಯ ಪ್ರಪಂಚದಷ್ಟೆ ಅದೃಶ್ಯ ಪ್ರಪಂಚವೂ ಮುಖ್ಯ ಎಂದು ಹೇಳಿದವರೇ ಭಾರತೀಯ ದಾರ್ಶನಿಕರು. ಕೇವಲ ವಾಸ್ತವ ಮಾತ್ರ ಪ್ರಪಂಚವಲ್ಲ. ಸೃಷ್ಟಿಯ ಸಮಗ್ರ ಚೇತನವನ್ನು ಒಳಗೊಂಡು ಕಲೆಯಲ್ಲಿ ಅದನ್ನು ಪ್ರತಿಮೆ, ಉಪಮೆ, ಸಂಕೇತ, ರೂಪಕಗಳ ಮೂಲಕ ಅಭಿವ್ಯಕ್ತಿಸುವ ಒಳಗಣ್ಣು ಮುಖ್ಯ. ಈ ಸೌಂದರ್ಯದ ಉತ್ಪ್ರೇಕ್ಷೆ, ಆರಾಧನೆ ಕೇವಲ ಲೌಕಿಕ ಅಲ್ಲ, ಕ್ಷಣ ಭಂಗುರ ಅಲ್ಲ. ಅದು ನಿರಂತರ ಜೀವ - ಶಿವರ ಸಂಬಂಧ ಕಲ್ಪಿಸುವ ಅಮೃತ ಸೇತುವೆ. ಅದ್ಭುತವಾದ ಈ ಜೀವನವನ್ನು ನಮಗೆ ಕೊಟ್ಟಿರುವ ಆ ಶಕ್ತಿ ಹೇಗಿರಬಹುದು? ಅದುವೆ ಕಲೆಯ ಅನ್ವೇಷಣೆ. ಅದುವೆ ಜೀವನದ ಸಾರ್ಥಕ್ಯ, ಸಾಕ್ಷಾತ್ಕಾರ. ಅದಕ್ಕಾಗಿಯೇ ಭಾರತೀಯ ಕಲೆ ಶಾಂತಿ ಮತ್ತು ಕರುಣಾರಸ ಪ್ರಧಾನ. ನಿತ್ಯ ಜೀವನದಲ್ಲಿ ಅಭಿವ್ಯಕ್ತವಾಗುವ ಸತ್ - ಚಿತ್ -ಆನಂದ ಸ್ವರೂಪವನ್ನು ಅರಿಯಬೇಕು, ಅನುಭವಿಸಬೇಕು ಎಂಬುದೇ ಭಾರತೀಯ ಕಲೆಯ ಮಹೋನ್ನತ ಉದ್ದೇಶ.

ಭಾರತೀಯ ಕಲೆಗಳಲ್ಲಿ ತತ್ತ್ವ ಮತ್ತು ಸಂಪ್ರದಾಯಕ್ಕೆ ಹೆಚ್ಚು ಮಹತ್ವ. ವ್ಯಕ್ತಿ, ಕ್ಷರ, ತತ್ವ ಅಕ್ಷರ. ವ್ಯಕ್ತಿ ತನ್ನ ಹಿತವನ್ನು ತತ್ತ್ವಕ್ಕಾಗಿ ತ್ಯಾಗ ಮಾಡಬೇಕು ಎಂಬುದು ಭಾರತೀಯ ಮನಸ್ಸಿನಗುರಿ ಹಾಗಾಗಿಯೇ ನಾವು ಐತಿಹಾಸಿಕ ದಾಖಲೆಗಳ ಬಗ್ಗೆಯೇ ತಲೆ ಕೆಡಿಸಿಕೊಂಡದ್ದೂ ಕಡಿಮೆ. ಕಲೆ ಕಾಲಾತೀತ ಅಲ್ಲವೆ? ತೈತ್ತಿರಿಯೋಪನಿಷತ್ತಿನಲ್ಲಿ ಜೀವನದ ಒಟ್ಟು ಉದ್ದೇಶದ ಬಗ್ಗೆ ಒಂದು ಮಾತು ಹೀಗೆ ಬರುತ್ತದೆ -

**ಆನಂದೋ ಬ್ರಹ್ಮೇತಿ ವ್ಯಜಾನಾತ್ ।**
**ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ।**
**ಆನಂದೇನ ಜಾತಾನಿ ಜೀವಂತಿ ।**
**ಆನಂದಂ ಪ್ರಯಂತ್ಯಭಿಸಂವಿಶಂತೀತಿ ॥**

(ಆನಂದವೇ ಬ್ರಹ್ಮ. ಆನಂದದಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ. ಆನಂದದಿಂದ ಜೀವಿಸುತ್ತವೆ. ಆನಂದವನ್ನು ಸೇರುತ್ತವೆ)

ಕಲೆಯ ಮೂಲ ಉದ್ದೇಶ ಅಪರಿಪೂರ್ಣವಾದ ಈ ಬದುಕಿನಿಂದ ಪೂರ್ಣತ್ವ ಪಡೆಯುವುದು. ಈ ಶಾಂತಿ ಪಾಠದ ಒಟ್ಟು ಗುರಿ ಸರ್ವ ಸಮರ್ಪಣಭಾವ.

ಗಂಜೀಫಾ ಕಲೆಯೂ ಆಟದ ರೂಪದಲ್ಲಿ ಬೆಳೆದು, ಕಲೆಯ ಮಾಧ್ಯಮದಲ್ಲಿ ಈ ಪ್ರಚೋದನೆಯನ್ನೇ ಕೊಡುತ್ತ ಬಂದಿದೆ. ಇಂದು ಆಟವನ್ನು ಮರೆತರೂ ಅದರ ಕಲೆ ವಾಮನ ತ್ರಿವಿಕ್ರಮನಾದಂತೆ ವಿಶ್ವರೂಪವಾಗಿ ವ್ಯಾಪಿಸಿದೆ. ಅದುವೆ ಈ ಕಲೆಯ ಸಾಮರ್ಥ್ಯ, ಸಾರ್ಥಕ್ಯ, ಸಾಕ್ಷಾತ್ಕಾರ.



## ಅನುಬಂಧ - 1

## ಮುಮ್ಮಡಿ ಕೃಷ್ಣರಾಜ ಒಡೆಯರು ಸೃಜಿಸಿದ / ಆಡುತ್ತಿದ್ದ ಗಂಜೀಫಾ ಆಟಗಳು ಮತ್ತು ಎಲೆಗಳ ಸಂಖ್ಯೆಗಳು (ಆವರಣದಲ್ಲಿ)

1. ಚಾಮುಂಡೇಶ್ವರೀ (320)
2. ಜಗನ್ಮೋಹನ (360)
3. ನವೀನದಶಾವತಾರ(240)
4. ನವಗ್ರಹ (210)
5. ಪಂಚಪಾಂಡವ (210)
6. ದೇವೀದಶಾವತಾರಿ (180)
7. ಅಷ್ಟದಿಕ್ಪಾಲ (160)
8. ಮನೋಹರ (160)
9. ಸರ್ವಮಂಗಳಾ (160)

11. ಕೃಷ್ಣರಾಜ (72)
12. ಸದ್ಯೋಜ್ಯಾತ (72)
13. ನವೀನರಾಮ (36)
14. ಮಹಿಷಮರ್ದಿನಿ(216)
15. ದಶಾವತಾರ(120)
16. ರಾಮಾಯಣ(96)
17. ಸಾಮ್ರಾಜ್ಯ (600)
18. ಅಷ್ಟೈಶ್ವರ್ಯ(320)
10. ನವರತ್ನ(160)



## ಅನುಬಂಧ - 2

## ಭಾರತದ ಗಂಜೀಫಾ ಕೇಂದ್ರಗಳು

* ಜಮ್ಮು ಮತ್ತು ಕಾಶ್ಮೀರ - ಶ್ರೀನಗರ
* ಹಿಮಾಚಲ ಪ್ರದೇಶ
* ಪಂಜಾಬ - ಹೋಶಿಯಾರಪುರ
* ಹರಿಯಾಣ
* ಉತ್ತರ ಪ್ರದೇಶ - ಲಕ್ನೋ, ವಾರಾಣಸಿ, ಖಜುವಾತೆಹಸಿಲ್
* ಬಿಹಾರ - ಪಾಟ್ನಾ
* ಪಶ್ಚಿಮ ಬಂಗಾಳ - ಮುರ್ಶಿದಾಬಾದ್, ಬಿಷ್ಣುಪುರ
* ಉತ್ತರ ಪೂರ್ವಾಂಚಲದ ರಾಜ್ಯಗಳು (ಹಿಂದಿನ ಅಸ್ಸಾಂ)
* ರಾಜಸ್ಥಾನ - ಜೈಪುರ, ಕರ್‌ಲಿ, ಉದಯಪುರ, ಸವಾಯ್ ಮಾಧೋಪುರ,
* ಗುಜರಾತ - ಅಹಮ್ಮದಾಬಾದ್, ಕೆಂಬೆ
* ಮಧ್ಯಪ್ರದೇಶ - ಶಿವಪುರ
* ಒರಿಸ್ಸ - ಸೋನೆಪುರ, ಪುರಿ, ಪರ್ಲಕಿಮುಂಡಿ, ಬಾರಾಪಳ್ಳಿ, ಚಿಕಾತಿ,
* ಮಹಾರಾಷ್ಟ್ರ - ಪುಣೆ, ಮುಂಬಯಿ, ಸಾವಂತವಾಡಿ (ಕೊಂಕಣ)
* ಆಂಧ್ರ - ನಿರ್ಮಲ, ಹೈದರಾಬಾದ್, ಕರ್ನೂಲು, ಬಂಗನಪಳ್ಳಿ,

ಕಡಪ ಕೊಂಡಪಳ್ಳಿ, ಬಾಲಕೊಂಡ

* ಕರ್ನಾಟಕ -ಮೈಸೂರು, ಶ್ರೀರಂಗಪಟ್ಟಣ, ಗಂಜಾಂ, ನಾಗಮಂಗಲ, ಮಡಿಕೇರಿ, ಕಿನ್ನಾಳ, ಸುರಪುರ, ಧಾರವಾಡ, ಬೆಳಗಾವಿ

* ತಮಿಳುನಾಡು - ತಂಜಾವೂರು

* ಕೇರಳ

* ನೇಪಾಳ - ಭಕ್ತಪುರ, ಭಡಗಾಂವ್, ಪಾಟನ್



## ಅನುಬಂಧ - 3

## ಗಂಜೀಫಾದ ಕೆಲವು ಪಾರಿಭಾಷಿಕ ಶಬ್ದಗಳು

| | | |
|---|---|---|
| ಅರ್ಕ | - | ಸೂರ್ಯ (ಸಂಸ್ಕೃತ) |
| ಅಫತಾಬ್ | - | ಸೂರ್ಯ (ಪರ್ಶಿಯನ್) |
| (ಆಟ ಆರಂಭಿಸುವವನು) | | |
| ಅಷ್ಟಮಾಲಾ ಸಾರ | - | ಕೃಷ್ಣಲೀಲೆಯ ಚಿತ್ರಗಳನ್ನು ತೋರಿಸುವ ಒರಿಸ್ಸ ಗಂಜೀಫಾ |
| ಅಸ್ತ್ರಂಗಿ ಸಾರ | - | ಒರಿಸ್ಸದ ಮುಘಲ್ ಎಲೆಗಳು |
| ಎಸ್ಪೆಡೋಸ್ | - | ಖಡ್ಗ ಲಾಂಛನದ ಪೋರ್ತುಗೀಸ್ ಗಂಜೀಫಾ |
| ಏಕರಂಗ | - | ಪರ್ಶಿಯನ್ ನಕ್ಷ ಕುಸುರಿ ಕೆಲಸದ ಗಂಜೀಫಾ |
| ಕಿಮಾಶ್ | - | ಮುಘಲ್ ಗಂಜೀಫಾದ ಒಂದು ವಿಧ |
| ಚಡ | - | ಮೈಸೂರು ಶೈಲಿಯ ಗಂಜೀಫಾ |
| ಚಾಂಗ್ | - | ಯಾರ್ಘ್ ಎಂಬ Harp ನಂಥ ವಾದ್ಯ ಗಂಜೀಫಾದಲ್ಲಿ ಒಂದು ಸಂಕೇತ |
| ನಯಿಬ್ | - | ಮುಮುಲುಕ್ ಗಂಜೀಫಾ - ನಾಯಕ |
| ಫೂಲ್ | - | ಪುಷ್ಪ ವಿನ್ಯಾಸದ ಗಂಜೀಫಾ |
| ಬಾದ್‌ಷಾ | - | ಚಕ್ರವರ್ತಿ, ಗಂಜೀಫಾದ ಪ್ರಧಾನ ಎಲೆ |
| ಬಾರ್ಘಿ, ಬಾರ್ಘ್ | - | ಪಣವಿರುವ ಗಂಜೀಫಾ ಪೆಟ್ಟಿಗೆ ಇದನ್ನು 'ರಂಗ್' ಎಂದೂ ಹೇಳುತ್ತಿದ್ದರು. |

| | | |
|---|---|---|
| ಬೀಬಿ | - | ರಾಣಿ |
| ಭೇದ | - | ಒಂದು ಮುಘಲ್ ಗಂಜೀಫಾ |
| ಮಾಲಿಕ | - | ಮಾಮುಲಕ್ ಗಂಜೀಫಾ - ನಾಯಕ |
| ಸೈಫ್ | - | ಕತ್ತಿ ಚಿಹ್ನೆಯ ಗಂಜೀಫಾ |
| ಸಮ್ಶೇರ್ | - | ಒರಿಸ್ಸಾದ ಕತ್ತಿ ಚಿಹ್ನೆಯ ಗಂಜೀಫಾ |
| ಹಮ್‌ರಂಗ | - | ತುರುಫು ಇಲ್ಲದ ಗಂಜೀಫಾ ಆಟ |



## ಅನುಬಂಧ - 4

## ಆಕರ ಗ್ರಂಥಗಳು


- ಶ್ರೀ ತತ್ತ್ವನಿಧಿ - ಮುಮ್ಮಡಿ ಕೃಷ್ಣರಾಜ ಒಡೆಯರು
- ಭಾರತೀಯ ಸಂಸ್ಕೃತಿ ದರ್ಶನ (ಸಂಪಾದಕ : ಅ.ನ.ಕೃ.)
- GANJIFA - The Playing cards of India By RUDOLF VON LEYDEN
  VICTORIA AND ALBERT MUSEUM, LONDON
- ಬಾಬರ್ - ನಾಮಾ (ಇಂಗ್ಲಿಷ್ ಅನುವಾದ - ಲಂಡನ್ 1969)
- ಐನ್ - ಈ - ಅಕ್ಬರಿ (ಅಬುಲ್ ಫಜಲ್ - ಇ -ಅಲ್ಲಮಿ)
- ವರ್ಣಾವಳಿ ದರ್ಶಕ ಗಂಜೀಫಾ (ಮರಾಠಿ- 1943)
- Gambling game of Naqsh and Ganjifa cards (K. Gupta - 1979)
- ಗಂಜೀಫಾ ಖೇಳನ - (ಸಂಸ್ಕೃತ - 1916 - ಗಿರಿಧರ)
- ನವಗ್ರಹಾಂಚಾ ಗಂಜೀಫಾಂಚಾ ದಾವಾ ಖೇಳಣ್ಯಾಚಿ ಮಾಹಿತಿ (ಮರಾಠಿ - ಎಸ್. ಎಸ್. ಹೆಂಡ್ರೆ 1911)
- ಗಂಜೀಫಾ ಖೇಳ್ (ಮರಾಠಿ - ಬಿ.ಜಿ. ಪಾಂಡೆ)

# ವರ್ಣಚಿತ್ರದ ಶೀರ್ಷಿಕೆಗಳು

I ಶ್ರೀ ರಂಗನಾಥ

*ರಘುಪತಿ ಭಟ್ - ಮೈಸೂರು ಶೈಲಿ*

II ಪುರಿ ಜಗನ್ನಾಥ

*ಒರಿಸ್ಸಾದ ಮುಘಲ್ ದರಬಾರ್ ಕಲಂ*

III ರವಿ ರಾಜ (ಸೂರ್ಯ)

*ಸಾವಂತವಾಡಿಯ ನವಗ್ರಹ ಗಂಜೀಫಾ*

IV ಬಂಗಾಳ (ವಿಷ್ಣುಪುರ)

*ನರಸಿಂಹ-ದಶಾವತಾರ ಗಂಜೀಫಾ*

V ರಾಜಸ್ತಾನದ ಶ್ರೀನಾಥಜಿ

VI ಕಾಶ್ಮೀರ ಗಂಜೀಫಾ

*ನಕ್ಷ್ ಶೈಲಿ ಪರ್ಶಿಯಾ ಪ್ರಭಾವ*

VII ನೇಪಾಲ

*ವಾಮನಾವತಾರ (ದಶವತಾರ) ಬೌದ್ಧ ಪ್ರಭಾವ*

VIII ಗಂಜೀಫಾ ಪೇಟಿಕಾ (ಪೆಟ್ಟಿಗೆ)

*ಸೋನೆಪುರ, ಒರಿಸ್ಸ*

'ಹ್ರಸ್ವಮಾನೇನ ವಿಶ್ವಂ'
ಎಂಬ ಮಾತಿನಂತೆ ಪುಟ್ಟದಾದ ಈ ಪುಸ್ತಕದಲ್ಲಿ ಗಂಜೀಫಾ ಚಿತ್ರಕಲೆಯ ಕುರಿತು ಸಚಿತ್ರ-ಸಂಕ್ಷಿಪ್ತ ವಿವರಗಳಿವೆ. ಗಂಜೀಫಾ ಕುರಿತು ಕನ್ನಡದಲ್ಲಿ ಇದೇ ಮೊತ್ತ ಮೊದಲನೆಯ ಪುಸ್ತಕ. ಮರೆತು ಮಾಯವಾಗಿ ಮೂಲೆಗುಂಪಾದ ಈ ಕಲೆಯ ಪುನರುತ್ಥಾನ ಕಾರ್ಯದಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯೂ ಪಾಲ್ಗೊಂಡಿದೆ.

